WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜೂನ್ ೨೧, ೨೦೧೨ (ಜ್ಯೇಷ್ಠ ೩೧, ಶಕ ವರ್ಷ ೧೯೩೪) | ಸಂಚಿಕೆ ೨೫ |
|---|---|---|


## ಭಾಗ–೪

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಇಲಾಖೆ

**ಸಹಕಾರ ಸಂಘಗಳ ನಿಬಂಧಕರು, ನಂ. 1, ಆಲಿಆಸ್ಕರ್ ರಸ್ತೆ, ಬೆಂಗಳೂರು–52 ಇವರ ನಡವಳಿಗಳು**

**ವಿಷಯ :** ಕು॥ ಎಸ್. ಲಿಖಿತ ದ್ವಿತೀಯ ದರ್ಜೆ ಸಹಾಯಕರು, (ಪರಿಕ್ಷಾರ್ಥ) ಕೇಂದ್ರ ಕಛೇರಿ, ಬೆಂಗಳೂರು ಇವರ ಅನಧಿಕೃತ ಗೈರುಹಾಜರಾತಿ–ಕರ್ನಾಟಕ ನಾಗರೀಕ ಸೇವಾ (ಪರಿಕ್ಷಾರ್ಥ) ನಿಯಮಗಳು 1977 ರನ್ವಯ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸುವ ಕುರಿತು.

**ಉಲ್ಲೇಖ :**
1. ಈ ಕಛೇರಿ ಪತ್ರ ಸಂ. ಸಿಬ್ಬಂದಿ/16/ಇಸಿಸಿ/2011–12, ದಿನಾಂಕ : 17–11–2011.
2. ಸರ್ಕಾರದ ಪತ್ರ ಸಂ. ಸಇ/401/ಎಸಸೇ/2011, ದಿನಾಂಕ : 12–12–2011
3. ಈ ಕಛೇರಿ ಜ್ಞಾಪನಾ ಸಂ. ಸಿಬ್ಬಂದಿ/16/ಇಸಿಸಿ/2011–12, ದಿನಾಂಕ : 14–12–2011.
4. ಈ ಕಛೇರಿ ಆದೇಶ ಸಂ. ಸಿಬ್ಬಂದಿ/220/ಇಎನ್‌ಪಿ/2011–12, ದಿನಾಂಕ : 20–01–2012.
5. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಗಣಕ ಕೋಶ, ಕೇಂದ್ರ ಕಛೇರಿ ಇವರ ಆಂತಕ ಟಿಪ್ಪಣಿ ಸಂ. ಆರ್‌ಸಿಎಸ್/34/ಸಿಸಿ/2011–12, ದಿನಾಂಕ : 22–02–2011.
6. ಇದೇ ಸಮಸಂಖ್ಯೆಯ ದಿನಾಂಕ : 19–03–2012ರಲ್ಲಿ ಸರ್ಕಾರಕ್ಕೆ ಬರೆದ ಪತ್ರ.
7. ಸರ್ಕಾರದ ಪತ್ರ ಸಂ. ಸಇ/401/ಎಸಸೇ/2011, ದಿನಾಂಕ : 25–04–2012.

**ಪ್ರಸ್ತಾವನೆ :**

ಕು॥ ಎಸ್. ಲಿಖಿತ ಇವರು ಅನುಕಂಪದ ನೆಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಇಲಾಖೆಗೆ ನೇಮಕಗೊಂಡು ದಿನಾಂಕ : 04–01–2010 ರಂದು ಕೇಂದ್ರ ಕಛೇರಿಯ ಸಿಬ್ಬಂದಿ ವಿಭಾಗದಲ್ಲಿ ಕಾರ್ಯವರದಿ ಮಾಡಿಕೊಂಡಿರುತ್ತಾರೆ. ನೇಮಕಾತಿ ಷರತ್ತು/ನಿಬಂಧನೆಗಳಂತೆ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರಡಿ ಎರಡು (2) ವರ್ಷಗಳು ಅರ್ಹತಾ ಪರೀಕ್ಷಾರ್ಥ ಅವಧಿಯನ್ನು ಇವರು ತೃಪ್ತಿಕರವಾಗಿ ಪೂರೈಸಬೇಕಾಗಿರುತ್ತದೆ.

ಆದರೆ, ಈ ರೀತಿ 2 ವರ್ಷಗಳ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮೊದಲೇ ಇವರು ದಿನಾಂಕ : 01–07–2011 ರಿಂದ 12–12–2011 ರವರೆಗಿನ ಅವಧಿಯಲ್ಲಿ ವಿವಿಧ ದಿನಾಂಕಗಳಮದು ಅನಧಿಕೃತ ಗೈರು ಹಾಜರಾಗಿ ಕಛೇರಿ ಕೆಲಸಕ್ಕೆ ಅಡಚಣೆ ಉಂಟು ಮಾಡಿದ ಹಿನ್ನೆಲೆಯಲ್ಲಿ ಇವರ ಹಾಜರಾತಿ, ಕರ್ತವ್ಯ ನಿರ್ವಹಣೆ, ಶಿಸ್ತು ತೃಪ್ತಿಕರವಾಗಿರದೆ ಇದ್ದುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರಡಿ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಲು ಈ ಹಿಂದೆ ಉಲ್ಲೇಖ (1)ರ ದಿನಾಂಕ : 17–11–2011ರಲ್ಲಿ ಸರ್ಕಾರದೊಂದಿಗೆ ಪ್ರಸ್ತಾಪಿಸಲಾಗಿತ್ತು. ಆದರೂ, ಇವರಿಗೆ ಒಂದು ಅವಕಾಶವೆಂಬಂತೆ ಉಲ್ಲೇಖ (2)ರ ಸರ್ಕಾರದ ಸೂಚನೆ ಮೇರೆಗೆ ಮತ್ತು ಇವರ ಮನವಿಯ ಮೇರೆಗೆ

ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸುವ ತನಕ ಪುನಃ ಇಂತಹ ಪ್ರಸಂಗಳು ಮರುಕಳಿಸಿದಲ್ಲಿ ಕಠಿಣ ಕ್ರಮ ಜರುಗಿಸಲಾಗುವುದೆಂದು ಉಲ್ಲೇಖ (3)ರ ಜ್ಞಾಪನದ ಮೂಲಕ "ಎಚ್ಚರಿಕೆ" ನೀಡಲಾಗಿತ್ತು. ಈ ಮೇರೆಗೆ ಸದರಿ ನೌಕರರು ದಿನಾಂಕ : 13–12–2011ರ ಮನವಿಯ ಮೂಲಕ ಮತ್ತೊಮ್ಮೆ ಗೈರು ಹಾಜರಾಗದೆ. ಕರ್ತವ್ಯಕ್ಕೆ ಹಾಜರಾಗುತ್ತೇನೆಂದು ಮನವಿ ಮಾಡಿ, ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಈ ನೌಕರರನ್ನು ಕೇಂದ್ರ ಕಛೇರಿಯ ಗಣಕ ಕೋಶದಲ್ಲಿ ಕಾರ್ಯ ನಿರ್ವಹಿಸುವಂತೆ ಉಲ್ಲೇಖ (4)ರಂತೆ ನಿಯೋಜಿಸಿದ ಮೇರೆಗೆ, ಇವರು ದಿನಾಂಕ : 25–01–2012 ರಂದು ಗಣಕ ಕೋಶದಲ್ಲಿ ಕರ್ತವ್ಯಕ್ಕೆ ಹಾಜರಾಗಿ, ದಿನಾಂಕ : 06–02–2012 ರಂದು ದೂರವಾಣಿ ಮೂಲಕ ಅನಾರೋಗ್ಯದ ನಿಮಿತ್ತ ಒಂದು ದಿನದ ಸಾಂದರ್ಭಿಕ ರಜೆ ಮಂಜೂರಾತಿಗೆ ಕೋರಿ, ತದನಂತರ ದಿನಾಂಕ : 07–02–2012 ರಿಂದ ಸತತವಾಗಿ ಕೆಲಸಕ್ಕೆ ಗೈರು ಹಾಜರಾಗಿರುತ್ತಾರೆ ಎಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಗಣಕ ಕೋಶ) ಕೇಂದ್ರ ಕಛೇರಿ ಇವರು ಉಲ್ಲೇಖ (5)ರ ಆಂತರಿಕ ಟಿಪ್ಪಣಿ ಮೂಲಕ ವರದಿ ಮಾಡಿ, ಇವರ ಸ್ಥಳಕ್ಕೆ ಬೇರೆ ನೌಕರರನ್ನು ನಿಯೋಜಿಸುವಂತೆ ಕೋರಿರುತ್ತಾರೆ.

ಈ ನೌಕರರ ಅನಧಿಕೃತ ಗೈರು ಹಾಜರಾತಿಗೆ ಉಲ್ಲೇಖ (3) ರಂತೆ ಕಾರಣ ಕೇಳಿ ನೋಟೀಸನ್ನು ಹೊರಡಿಸಿ, ಈ ನೋಟೀಸು ತಲುಪಿದ ಕೂಡಲೇ ಇವರ ವಿವರಣೆಯೊಂದಿಗೆ ಕಛೇರಿ ಕೆಲಸಕ್ಕೆ ಹಾಜರಾಗುವಂತೆ, ತಪ್ಪಿದಲ್ಲಿ ನಿಯಮಾನುಸಾರ ಕ್ರಮ ಕೈಗೊಳ್ಳುವುದಾಗಿ ತಿಳುವಳಿಕೆ ನೀಡಲಾಗಿತ್ತು.

ಅರ್ಹತಾ ಪರೀಕ್ಷಾರ್ಥ ಅವಧಿಯಲ್ಲಿರುವ ಈ ನೌಕರರು ತಮ್ಮ ಎರಡು ವರ್ಷಗಳ ಅರ್ಹತಾ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮೊದಲೇ ಎರಡನೇ ಬಾರಿ ಸತತವಾಗಿ ಅನಧಿಕೃತ ಗೈರು ಹಾಜರಾಗಿ ಉಳಿದಿರುವುದರಿಂದ ಇವರು ತಮ್ಮ ಹುದ್ದೆಯಲ್ಲಿ ಮುಂದುವರೆಯಲು ಸೂಕ್ತರಲ್ಲ ವೆಂಬುದಾಗಿ ಮನವರಿಕೆಯಾಗಿ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರ ನಿಯಮ 6(1)ರನ್ವಯ ಇವರನ್ನು ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಲು ಉದ್ದೇಶಿತ ಈ ಕಛೇರಿಯ ಕ್ರಮಕ್ಕೆ ಸ್ಥಿರೀಕರಿಸುವಂತೆ ಕೋರಿ ಉಲ್ಲೇಖ (6)ರಲ್ಲಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಲಾಗಿತ್ತು.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಉಲ್ಲೇಖ (7)ರಲ್ಲಿ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರನ್ವಯ ಪರಿಶೀಲಿಸಲು ಗ್ರೂಪ್ "ಸಿ" ನೌಕರರ ನೇಮಕಾತಿ ಪ್ರಾಧಿಕಾರವೆಂದು ಇಲಾಖಾ ಮುಖ್ಯಸ್ಥರಿಗೆ ಅಧಿಕಾರ ಪ್ರತ್ಯಾಯೋಜಿಸಿರುವುದರಿಂದ, ಕು॥ ಎಸ್. ಲಿಖಿತ, ಇವರನ್ನು ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸುವ ಕುರಿತು ನಿಯಮಾನುಸಾರ ಈ ಕಛೇರಿಯ ಹಂತದಲ್ಲೇ ಸೂಕ್ತ ಕ್ರಮ ಕೈಗೊಳ್ಳುವಂತೆ ಸೂಚಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಕು॥ ಎಸ್. ಲಿಖಿತ ದ್ವಿತೀಯ ದರ್ಜೆ ಸಹಾಯಕರು (ಪರೀಕ್ಷಾರ್ಥ) ಕೇಂದ್ರ ಕಛೇರಿ, ಇವರನ್ನು ಕೇಂದ್ರ ಕಛೇರಿಯ ಮತ್ತು ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಲು ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ, ಸಂಖ್ಯೆ : ಸಿಬ್ಬಂದಿ/80/ಇಸಿಸಿ/2011–12, ದಿನಾಂಕ : 15ನೇ ಮೇ, 2012.**

ಪ್ರಸ್ತಾವನೆಯಲ್ಲಿ ತಿಳಿಸಿದ ಕಾರಣಗಳಿಗಾಗಿ, ಕಛೇರಿ ಕೆಲಸಕ್ಕೆ ಆಗಿಂದಾಗ್ಗೆ / ಸತತವಾಗಿ ಅನಧಿಕೃತ ಗೈರು ಹಾಜರಾಗಿ ಉಳಿದಿರುವ ಕು॥ ಎಸ್. ಲಿಖಿತ, ದ್ವಿತೀಯ ದರ್ಜೆ ಸಹಾಯಕರು (ಪರೀಕ್ಷಾರ್ಥ), ಗಣಕ ಕೋಶ, ಕೇಂದ್ರ ಕಛೇರಿ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರಡಿ ಕೇಂದ್ರ ಕಛೇರಿಯ ಮತ್ತು ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಲಾಗಿದೆ.

**ಎಸ್.ಜಿ. ಹೆಗಡೆ**
ಸಹಕಾರ ಸಂಘಗಳ ನಿಬಂಧಕರು,
ಕೇಂದ್ರ ಕಛೇರಿ, ಬೆಂಗಳೂರು.

**ಪಿ.ಆರ್. 690**

## UNIVERSITY OF AGRICULTURAL SCIENCES, BANGALORE

**Administrative Office, GKVK, Bangalore-560 065**

## NOTIFICATION

**No. AO/RT/Prom.Res.Asst./Extn.Guide/Instructors/2012-13, Dated 18-5-2012**

**Sub :** Promotion to Non Masters Degree Research Assistants/Extension Guides/Instructors of UAS, Bangalore.

**Ref. :**
1. Minutes of the circulation Item (between 346$^{th}$ and 347$^{th}$) Meeting of the Board of Management vide Item No. 1.
2. Concurrence of the Comptroller dated 16-5-2012.
3. Approval of the Vice-Chancellor dated 18-5-2012.

In exercise of the power conferred under Statute 30 of UAS, Bangalore and in pursuance of the decision of the Board of Management referred to above, the following provision is made to provide the promotional opportunity to the Non Masters Degree Research Assistants/Extension Guides/Instructors working in UAS, Bangalore;

This will come into force from the date of publication in the Karnataka Gazette.

1. The Non Masters Degree Research Assistants/Extension Guides/Instructors working in UAS, Bangalore who do not have promotional Opportunity even once in their service period and even at the end of 22nd year of Service except for special Scale/Increment extended by the Government at the end of 10, 15 and 20 years of Service are eligible for promotion in the next pay scale of Rs. 13000-23850 with the new designation which will be with a prefix "Senior" to the post held by them.
2. This Non Masters Degree Research Assistants/Extension Guides/Instructors are eligible for promotion after completion of 22 years with satisfactory service.
3. This promotion is purely personnel to the incumbent. As and when the incumbent retires, the post shall stand abolished.

**By Order**

**P.D. 61** **Administrative Officer**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರು,**

**ದ.ಕ. ಉಪ ವಿಭಾಗ–1, ಬೆಂದೂರ್ ವೆಲ್, ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ**

**ಅಧಿಸೂಚನೆ**

**ಸಂಖ್ಯೆ : ಡಬ್ಲ್ಯೂಸಿಎ/ಸಿಆರ್/13/2012 ಎಫ್, ದಿನಾಂಕ 23ನೇ ಮೇ 2012**

| **ಅರ್ಜಿದಾರರು :** | | **ಪ್ರತಿವಾದಿಗಳು :** |
|---|---|---|
| 1. ಶ್ರೀಮತಿ ಸುನಿತ<br>W/o ದಿ. ಅರುಣ್ ಕೊಟ್ಯಾರಿ<br>2. ಬೇಬಿ ಯಶ್ಮಿತ,<br>D/o ಅರುಣ್ ಕೊಟ್ಯಾರಿ<br>Batheri Garden<br>ಬೋಳಾರ, ಚೋಯಿಲ್ಯಾಂಡ್, ಸ್ಕುಲ್‌ಬಳಿ, ಮಂಗಳೂರು | ವಿರುದ್ಧ | 1. ಶ್ರೀ ಎಂ. ಹರಿಶ್ಚಂದ್ರ ಗಟ್ಟಿ<br>S/o ದಿ. ಸುಬ್ಬಣ್ಣ ಗಟ್ಟಿ<br>Class I ಎಲೆಕ್ಟ್ರಿಕಲ್ ಕಂಟ್ರಾಕ್ಟರ್ ಪ್ರೊಪ್ರೈಟರ್,<br>ಹರೀಶ್ ಎಲೆಕ್ಟ್ರಿಕಲ್<br>R/at ಹರಿನಿವಾಸ<br>Kanura Thota ಸೋಮೇಶ್ವರ, ಮಂಗಳೂರು |

ಅರ್ಜಿದಾರರಾದ ಶ್ರೀಮತಿ ಸುನಿತ ಇವರು ತಮ್ಮ ಗಂಡನಾದ ಶ್ರೀ ಅರುಣೆ ಕೊಟ್ಯಾರಿ ಇವರು 1ನೇ ಪ್ರತಿವಾದಿಗಳಾದ ಶ್ರೀ ಎಂ. ಹರೀಶ್‌ಚಂದ್ರ ಗಟ್ಟಿ, ಬಿನ್ ದಿ. ಸುಬ್ಬಣ್ಣ ಗಟ್ಟಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ 24–09–2011 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ, ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ /ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಕಾರ್ಮಿಕ ಅಧಿಕಾರಿ ಹಾಗೂ**
**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
ದ.ಕ. ಉಪ ವಿಭಾಗ, ಮಂಗಳೂರು

**ಪಿ.ಆರ್. 732**

## ಕೃಷಿ ಇಲಾಖೆ

**ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು–1**

**ಸಂಖ್ಯೆ : ಸಿಬ್ಬಂದಿ–2/ಲಿಪಿಕ/ವಿವ/ 60/2011–12, ದಿನಾಂಕ 10–03–2012**

**ವಿಷಯ:** ಶ್ರೀ ಎಸ್. ಧನರಾಜ್, ದ್ವಿತೀಯ ದರ್ಜೆ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರು, ಭಟ್ಕಳ ಇವರನ್ನು ಸರ್ಕಾರಿ ಸೇವೆಯಿಂದ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** 1. ಸಕೃನಿ, ಭಟ್ಕಳ ರವರ ಕಾರಣ ಕೇಳುವ ನೋಟೀಸ್. ಸಂ.ಸಕೃನಿಭ/ಸಿ/28/ದ್ವಿದಸ/ಗೃಹಾ/2007–08, ದಿನಾಂಕ 02–06–2007.

2. ಸಕೃನಿಭ/ಸಿ/ದ್ವಿದಸ/ಗೃಹಾ/2006–07, ದಿನಾಂಕ 04–04–2007, 15–05–2007.

ಉಲ್ಲೇಖ:

3. ಸಕೃನಿಭ/ಸಿ/28/ದ್ವಿದಸ/ಗೈಹಾ/2007–08, ದಿನಾಂಕ 04–09–2007, 22–09–2007, 07–11–2007, 01–02–2008, 16–06–2008, 16–06–2008, 30–06–2008.
4. ಜಂಟಿ ಕೃಷಿ ನಿರ್ದೇಶಕರು, ಕಾರವಾರ ಇವರ ಪತ್ರ ಸಂಖ್ಯೆ : ಜಕೃನಿಕಾ/ಸಿಬ್ಬಂದಿ–1/ಅಗೈ/ವಿವ/2009–10, ದಿನಾಂಕ 03–08–2009.
5. ಈ ಕಛೇರಿ ಕಾರಣ ಕೇಳುವ ನೋಟೀಸ್ ಸಂಖ್ಯೆ : ಸಿಬ್ಬಂದಿ–2/ಲಿಪಿಕ/ವಿವ/92/2009–10, ದಿನಾಂಕ 28.10.2009 ಮತ್ತು 03–02–2010.
6. ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟಣೆ ದಿನಾಂಕ 12–10–2011.

**ಪ್ರಸ್ತಾವನೆ :**

ಶ್ರೀ ಎಸ್. ಧನರಾಜ್, ದ್ವಿತೀಯ ದರ್ಜೆ ಸಹಾಯಕ ಇವರು ಅನುಕಂಪದ ಆಧಾರದ ಮೇರೆಗೆ ನೇಮಕಾತಿ ಹೊಂದಿ ದಿನಾಂಕ 22.06.2002 ರಂದು ಸಹಾಯಕ ಕೃಷಿ ನಿರ್ದೇಶಕರು, ಭಟ್ಕಳ ಕಚೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ನೇಮಕಾತಿ ನಿಯಮಗಳ ಪ್ರಕಾರ ಇವರು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಕಾಲ ಪರಿವೀಕ್ಷಣಾವಧಿಯಲ್ಲಿದ್ದು, ಈ ಅವಧಿಯಲ್ಲಿ ಇಲಾಖಾ ಪರೀಕ್ಷೆಗಳಾದ ಕನ್ನಡ ಭಾಷಾ ಪರೀಕ್ಷೆ ಮತ್ತು ಕಿರಿಯ ಲೆಕ್ಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕಾಗಿರುತ್ತದೆ. ಇವರು ಪರಿವೀಕ್ಷಣಾವಧಿಯಲ್ಲಿ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವ ಬಗ್ಗೆ ದಾಖಲಾತಿಗಳನ್ನು ಸಹಾಯಕ ಕೃಷಿ ನಿರ್ದೇಶಕರು, ಭಟ್ಕಳ ಇವರಿಗೆ ಮೂಲ ದಾಖಲೆಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಇವರು ಮೇಲಾಧಿಕಾರಿಗಳ ಅನುಮತಿಯನ್ನು ಪಡೆಯದೇ ದಿನಾಂಕ 17–03–2007 ರಿಂದ 27–03–2007 ರವರೆಗೆ, 08–05–2007 ರಿಂದ 31–05–2007ರ ವರೆಗೆ 03–09–2007, 17–09–2007 ರಿಂದ 18–09–2007 ರವರೆಗೆ, 21–09–2007 ರಿಂದ 12–12–2007ರ ವರೆಗೆ 09–06–2008 ರಿಂದ 16.06.2008 ರವರೆಗೆ 21–06–2008 ರಿಂದ 31–12–2008 ರವರೆಗೆ 09–03–2009 ರಿಂದ 18–03–2009 ರವರೆಗೆ, ಕಛೇರಿ ಮುಖ್ಯಸ್ಥರಿಗೆ ರಜೆ ಅರ್ಜಿಯನ್ನು ಸಲ್ಲಿಸದೇ ಪದೇ ಪದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ. ಇವರ ವರ್ತನೆ ಬಗ್ಗೆ ಸಹಾಯಕ ಕೃಷಿ ನಿರ್ದೇಶಕರು, ಭಟ್ಕಳ ಇವರು ದಿನಾಂಕ 04–04–2007, 15–05–2007, 02–06–2007, 02–06–2007, 04–09–2007, 22–09–2007, 07–11–2007, 01.02.2008, 16–06–2008 ಮತ್ತು 30–06–2008 ರಲ್ಲಿ ಹಲವಾರು ಬಾರಿ ಕಾರಣ ಕೇಳುವ ನೋಟೀಸುಗಳನ್ನು ಜಾರಿ ಮಾಡಲಾಗಿದ್ದರೂ ಸಹ ಇವರ ವರ್ತನೆಯಲ್ಲಿ ಯಾವುದೇ ಬದಲಾವಣೆ ಕಂಡುಬಂದಿರುದಿಲ್ಲ ಹಾಗೂ ಇವರು ಯಾವುದೇ ಸಮಜಾಯಿಷಿ ನೀಡಿರುವುದಿಲ್ಲ. ನಂತರ ದಿನಾಂಕ 23.03.2009 ರಿಂದ ಇದುವರೆಗೂ ಕಛೇರಿಗೆ ಹಾಜರಾಗದೇ ಅಥವಾ ರಜಾ ಅರ್ಜಿಯನ್ನು ನೀಡದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆಂದು, ಜಂಟಿ ಕೃಷಿ ನಿರ್ದೇಶಕರು, ಕಾರವಾರ ಇವರು ಪತ್ರ ಸಂಖ್ಯೆ : ಜಕೃನಿಕ/ಸಿ–1/ಅಗೈ/ವಿವ/09–10 ರ ದಿನಾಂಕ 03–08–2009 ರಲ್ಲಿ ವರದಿ ಸಲ್ಲಿಸಿ ಸದರಿ ನೌಕರರು ಪರಿವೀಕ್ಷಣಾ ಅವಧಿಯಲ್ಲಿದ್ದು ಇವರ ವಿರುದ್ಧ ಸೂಕ್ತ ಕ್ರಮ ಜರುಗಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ ಇಲಾಖೆಯಿಂದ ದಿನಾಂಕ 28–10–2009 ಮತ್ತು ದಿನಾಂಕ 03–02–2010 ರಂದು ನೋಂದಣಿ ಅಂಚೆ ಮೂಲಕ ಅವರ ಸ್ವಂತ ವಿಳಾಸಕ್ಕೆ ಕಾರಣ ಕೇಳುವ ನೋಟೀಸ್‌ನ್ನು ಕಳುಹಿಸಿದ್ದು, ಲಕೋಟೆ ಸ್ವೀಕೃತವಾಗದೆ ಕಚೇರಿಗೆ ವಾಪಸ್ಸಾಗಿರುತ್ತವೆ. ಆದುದರಿಂದ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಪ್ರಜಾವಾಣಿ ದಿನಪತ್ರಿಕೆಯಲ್ಲಿ ದಿನಾಂಕ 12–10–2011 ರಂದು ಪ್ರಕಟಣೆಯನ್ನು ನೀಡಿ ಈ ದಿನಾಂಕದಿಂದ 15 ದಿನಗಳ ಒಳಗಾಗಿ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು. ಆದರೂ ಇವರು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಸಹಾಯಕ ಕೃಷಿ ನಿರ್ದೇಶಕರು, ಭಟ್ಕಳ ಇವರ ಪತ್ರ ಸಂಖ್ಯೆ : ಸಕೃನಿಭ/ಸಿ–28/09–10, ದಿನಾಂಕ 17–12–2011 ರಲ್ಲಿ ತಿಳಿಸಿರುತ್ತಾರೆ.

ಶ್ರೀ ಎಸ್. ಧನರಾಜ್, ದ್ವಿತೀಯ ದರ್ಜೆ ಸಹಾಯಕ ಇವರು ಸರ್ಕಾರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಸರ್ಕಾರದ ದೈನಂದಿನ ಕೆಲಸ ಕಾರ್ಯಗಳಿಗೆ ಅಡ್ಡಿಯನ್ನುಂಟು ಮಾಡಿದ್ದು, ಸರ್ಕಾರಿ ನೌಕರರ ನಡತೆ ನಿಯಮಗಳನ್ನು ಉಲ್ಲಂಘಿಸಿರುತ್ತಾರೆ. ಹಾಗೂ ಇವರು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಬಗ್ಗೆ ದಾಖಲಾತಿಗಳನ್ನು ಸಲ್ಲಿಸದೇ ಇರುವುದರಿಂದ ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸಿರುವುದಿಲ್ಲ. ಇವರು ಅನಧಿಕೃತ ಗೈರು ಹಾಜರಿಯನ್ನು ಗಂಭೀರವಾಗಿ ಪರಿಗಣಿಸಿ ಇವರು ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರಾಗಿರುತ್ತಾರೆ. ಈ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣೆ) ನಿಯಮಾವಳಿ 1977ರ ನಿಯಮ 5(ಬಿ)ರ ಪ್ರಕಾರ ನೇಮಕಾತಿ ಪ್ರಾಧಿಕಾರಕ್ಕೆ ನೀಡಿರುವ ಅಧಿಕಾರವನ್ನು ಚಲಾಯಿಸಿ ಇವರನ್ನು ಸರ್ಕಾರಿ ಸೇವೆಯಿಂದ ಬಿಡುಗಡೆ ಮಾಡಬಹುದಾಗಿದೆ. ಅದರಂತೆ ಈ ಆದೇಶ.

**ಕಛೇರಿಯ ಆದೇಶ**

ಮೇಲೆ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಎಸ್. ಧನರಾಜ್, ದ್ವಿತೀಯ ದರ್ಜೆ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರು, ಭಟ್ಕಳ ಇವರನ್ನು ಸರ್ಕಾರಿ ಸೇವೆಗೆ ಅನರ್ಹರೆಂದು ತೀರ್ಮಾನಿಸಿ, ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣೆ) ನಿಯಮಾವಳಿಗಳು 1977ರ ನಿಯಮ 5(ಬಿ)ರಲ್ಲಿ ನೇಮಕಾತಿ ಪ್ರಾಧಿಕಾರಕ್ಕೆ ನೀಡಿರುವ ಅಧಿಕಾರವನ್ನು ಚಲಾಯಿಸಿ ದಿನಾಂಕ 20–03–2009 ರಿಂದಲೇ ಸರ್ಕಾರಿ ಸೇವೆಯಿಂದ ಬಿಡುಗಡೆ (Discharge) ಮಾಡಲಾಗಿದೆ.

**ಪಿ.ಆರ್. 712** **ಕೃಷಿ ಆಯುಕ್ತರು.**

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯ, ಕೋಲಾರ ಉಪ ವಿಭಾಗ, ಕೋಲಾರ

**ಕ್ರ.ಸಂ. ಎಆರ್‌ಕೆ/ಎಬಿಎನ್/ಸರ್‌ಚಾರ್ಜ್/20/2005–06**

**ವಿಷಯ:** ಸರ್‌ಚಾರ್ಜ್ ದಾ.ಸಂ. 20/2005–06 ಇದರಲ್ಲಿ ಜಂಟಿ ಜವಾಬ್ದಾರಿಯಲ್ಲಿದ್ದ ಶ್ರೀ ಕೆ. ಶೇಷಪ್ಪ, ಮಾಜಿ ಅಧ್ಯಕ್ಷರು, ದ್ಯಾಪಸಂದ್ರ ರೇಷ್ಮೆ ಬೆಳೆಗಾರರ ಮತ್ತು ರೈತರ ಸೇವಾ ಸಹಕಾರ ಸಂಘ ನಿ., ಇವರು ಈ ಪ್ರಕರಣದಲ್ಲಿನ ಅವ್ಯವಹಾರ ಮೊತ್ತಕ್ಕೆ ಜಂಟಿ ಜವಾಬ್ದಾರರಲ್ಲವೆಂದು ಲೆಕ್ಕ ಮರು ಪರಿಶೋಧನಾ ವರದಿಯಿಂದ ಸಾಬೀತಾಗಿದ್ದು ಇದರಿಂದ ಈ ಪ್ರಕರಣ ಆದೇಶದಲ್ಲಿ ಇವರನ್ನು ಕೈಬಿಡಲಾಗಿದೆ ಎಂದು ದಿನಾಂಕ 23–07–2011 ರಂದು ಆದೇಶಿಸಿದ್ದು ವಾದಿ ಸಂಘವೂ ಸಹಾ ಇವರ ಜವಾಬ್ದಾರಿ ಏನೂ ಇಲ್ಲವೆಂದು ಇವರ ಆದೇಶಪೂರ್ವ ಜಪ್ತಿಗೆ ಈಡು ಮಾಡಿದ್ದ ಸ್ಥಿರಾಸ್ತಿಗಳನ್ನು ಬಿಡುಗಡೆ ಮಾಡಿಕೊಡಲು ಅಭಿಪ್ರಾಯಪಟ್ಟಿದ್ದು, ಇವರ ಸ್ಥಿರಾಸ್ತಿಗಳನ್ನು ಆದೇಶಪೂರ್ವ ಜಪ್ತಿಗೆ ಈಡು ಮಾಡಿರುವುದನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 47(3)(ಸಿ) ರೀತ್ಯಾ ಬಿಡುಗಡೆ ಮಾಡುವ ಕುರಿತು.

**ಉಲ್ಲೇಖ:**
1) ಶ್ರೀ ಕೆ. ಶೇಷಪ್ಪ, ಇವರ ಅರ್ಜಿ ದಿನಾಂಕ 05–11–2011
2) ಕಾರ್ಯದರ್ಶಿ, ದ್ಯಾಪಸಂದ್ರ ರೇ.ಬೆ. ಹಾಗೂ ರೈ.ಸೇ.ಸ.ಸಂಘ ನಿ, ಮಾಲೂರು ಇವರಿಗೆ ಬರೆದ ಈ ಕಛೇರಿಯ ಪತ್ರ ಸಂ. ಎಆರ್‌ಕೆ/ಸರ್‌ಚಾರ್ಜ್ ದಾ.ನಂ. 20/2005–06, ದಿನಾಂಕ 29–12–2011.
3) ಕಾರ್ಯದರ್ಶಿ, ದ್ಯಾ.ರೇ.ಬೆ. ಹಾಗೂ ರೈ.ಸೇ.ಸ.ಸಂಘ ನಿ, ಮಾಲೂರು ಇವರ ಪತ್ರ ಸಂ. ಡಿಎಸ್‌ಎಫ್. ಎಸ್‌ಸಿಎಸ್ /63/2012, ದಿನಾಂಕ 21–02–2012.

**ಪ್ರಸ್ತಾವನೆ :**

ಕೆ. ಶೇಷಪ್ಪ, ಮಾಜಿ ಅಧ್ಯಕ್ಷರು, ಮತ್ತು ಶ್ರೀ ಎನ್. ನಾರಾಯಣಸ್ವಾಮಿ, ಮಾಜಿ ಕಾರ್ಯದರ್ಶಿ, ದ್ಯಾಪಸಂದ್ರ ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಸಂಘ ನಿ. ಮಾಲೂರು ಇವರ ಜಂಟಿ ಜವಾಬ್ದಾರಿಯಲ್ಲಿ ರೂ.502000–00 ಗಳ ವಸೂಲಿ ಕುರಿತು ಈ ಕಛೇರಿಯ ನ್ಯಾಯಾಲಯದಲ್ಲಿ ಎಆರ್‌ಕೆ/ಎಬಿಎನ್/ಸರ್‌ಚಾರ್ಜ್ 20/2005–06 ರಲ್ಲಿ ಸರ್‌ಚಾರ್ಜ್ ಪ್ರಕರಣ ದಾಖಲೆಯಾಗಿದ್ದು, ದಿನಾಂಕ 01–09–2008 ರಂದು ಜಂಟಿ ನಿರ್ದೇಶಕರು (ತನಿಖೆ ಮತ್ತು ಪರಿಶೀಲನಾ ಘಟಕ) ಲೆಕ್ಕ ಪರಿಶೋಧನಾ ನಿರ್ದೇಶಕರ ಕಛೇರಿ, ಬೆಂಗಳೂರು ಇವರು ಸಂಘದ ಕಾರ್ಯದರ್ಶಿಯವರಿಗೆ ಪತ್ರ ಬರೆದು ಸಂಘದ 2000–01 ನೇ ಸಾಲಿನ ಲೆಕ್ಕ ಪರಿಶೋಧನಾ ವರದಿ ದೋಷಪೂರಿತವೆಂದು ದುರುಪಯೋಗದ ಪೂರ್ಣ ಜವಾಬ್ದಾರಿಯನ್ನು ಸಂಘದ ಮಾಜಿ ಕಾರ್ಯದರ್ಶಿಯಾದ ಶ್ರೀ ಎನ್. ನಾರಾಯಣಸ್ವಾಮಿ ಇವರಿಂದ ವಸೂಲಿಗೆ ಸೂಚಿಸಿದ್ದು, ಹಾಗೂ ಮೇಲ್ಕಂಡ ದಾವಾ ಪ್ರಕರಣದ ಅರ್ಜಿದಾರರು ತಮ್ಮ ಲಿಖಿತ ವಾದದಲ್ಲಿ ಇದೇ ವಿಷಯ ಮಂಡಿಸಿದ್ದು, ಇದರಿಂದಾಗಿ ದಿನಾಂಕ 23–07–2011 ರ ಈ ನ್ಯಾಯಾಲಯದ ಆದೇಶದಲ್ಲಿ ಪ್ರಕರಣದ ಎರಡನೇ ಪ್ರತಿವಾದಿಯಾದ ಶ್ರೀ ಕೆ. ಶೇಷಪ್ಪ, ಮಾಜಿ ಅಧ್ಯಕ್ಷರು ಇವರ ಮೇಲಿನ ಆರೋಪವನ್ನು ಕೈ ಬಿಡಲಾಗಿದೆ.

ಉಲ್ಲೇಖ–1 ರ ರೀತ್ಯಾ ಶ್ರೀ ಕೆ. ಶೇಷಪ್ಪ, ಮಾಜಿ ಅಧ್ಯಕ್ಷರು, ದಿನಾಂಕ 05–11–2011 ರಂದು ಈ ಕಛೇರಿಗೆ ಪತ್ರ ಬರೆದು ಸರ್‌ಚಾರ್ಜ್ 20/2005–06 ರ ಪ್ರಕರಣದಲ್ಲಿ ತಾವು ಆರೋಪ ಮುಕ್ತರಾಗಿರುವುದಾಗಿಯೂ ಈ ಹಿಂದೆ ಇದೇ ಪ್ರಕರಣದ ಸಲುವಾಗಿ ಕಲಂ 103ರ ರೀತ್ಯಾ ತಮ್ಮ ಸ್ಥಿರಾಸ್ತಿಗಳನ್ನು ಆದೇಶ ಪೂರ್ವ ಜಪ್ತಿಗೆ ಈಡು ಮಾಡಿರುವುದನ್ನು ಬಿಡುಗಡೆ ಮಾಡಿ ಕೊಡಲು ಕೋರಿದ್ದು, ಉಲ್ಲೇಖ–2 ರಂತೆ ಈ ಬಗ್ಗೆ ವಾದಿ ಸಂಘದವರ ಅಭಿಪ್ರಾಯ ಕೋರಿ ವಾದಿ ಸಂಘದ ಕಾರ್ಯದರ್ಶಿಯವರಿಗೆ ಪತ್ರವನ್ನು ದಿನಾಂಕ 29–12–2011 ರಂದು ಬರೆಯಲಾಗಿತ್ತು. ಉಲ್ಲೇಖ–3 ರಂತೆ ಸಂಘದ ಕಾರ್ಯದರ್ಶಿ ದಿನಾಂಕ 21–02–2012 ರಂದು ಈ ಕಛೇರಿಗೆ ಪತ್ರ ಬರೆದು ಈ ನ್ಯಾಯಾಲಯದ ಆದೇಶದಂತೆ ಶ್ರೀ ಕೆ. ಶೇಷಪ್ಪ, ಮಾಜಿ ಅಧ್ಯಕ್ಷರು ಇವರ ಸ್ಥಿರಾಸ್ತಿಗಳನ್ನು ಬಿಡುಗಡೆ ಮಾಡಲು ಸಂಘದ ಆಡಳಿತ ಮಂಡಳಿ ಅಭಿಪ್ರಾಯ ಪಟ್ಟಿರುವುದಾಗಿ ನಿರಾಕ್ಷೇಪಣೆ ವ್ಯಕ್ತಪಡಿಸಿರುತ್ತದೆ.

ಶ್ರೀ ಕೆ. ಶೇಷಪ್ಪ ಬಿನ್ ಮುನಿಶ್ಯಾಮಪ್ಪ, ಮಾಜಿ ಅಧ್ಯಕ್ಷರು, ದ್ಯಾಪಸಂದ್ರ ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಸಂಘ ನಿ. ಮಾಲೂರು ಇವರ ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ರೀತ್ಯಾ ಆದೇಶ ಸಂಖ್ಯೆ : ಎಆರ್‌ಕೆ/ಎಂಕೆಟಿ/ಎಬಿಜೆ/6/ 2006–07, ದಿನಾಂಕ 29–08–2006 ರಂತೆ ಆದೇಶ ಪೂರ್ವ ಜಪ್ತಿಗೆ ಆದೇಶಿಸಿದ್ದು ಇವುಗಳನ್ನು ಆದೇಶಪೂರ್ವ ಜಪ್ತಿಯಿಂದ ಬಿಡುಗಡೆ ಮಾಡಲು ಈ ಕೆಳಕಂಡ ಆದೇಶ ನೀಡಲಾಗಿದೆ.

### ಆದೇಶ

ಪ್ರಸ್ತಾವನೆಯಲ್ಲಿ ವಿವರವಾಗಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಕ್ರ.ಸಂ. ಎಆರ್ 49/ಸರ್‌ಚಾರ್ಜ್ ದಾವೆ ಸಂಖ್ಯೆ 20/2005–06, ದಿನಾಂಕ 23–07–2001 ರ ಆದೇಶದಲ್ಲಿ ಎರಡನೇ ಪ್ರತಿವಾದಿಯಾದ ಶ್ರೀ ಕೆ. ಶೇಷಪ್ಪ, ಮಾಜಿ ಅಧ್ಯಕ್ಷರು, ದ್ಯಾಪಸಂದ್ರ ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಸಂಘ ನಿ., ಮಾಲೂರು ಇವರ ಮೇಲಿನ ಜಂಟಿ ಆರೋಪಗಳನ್ನು ಕೈಬಿಟ್ಟಿರುವುದರಿಂದ ಹಾಗೂ ವಾದಿ ಸಂಘದ ಕಾರ್ಯದರ್ಶಿಯವರು ಶ್ರೀ ಕೆ. ಶೇಷಪ್ಪ, ಸಂಘದ ಮಾಜಿ ಅಧ್ಯಕ್ಷರು ಇವರ ಸ್ಥಿರಾಸ್ತಿಗಳನ್ನು ಬಿಡುಗಡೆ ಮಾಡಲು ಸಂಘದ ಆಡಳಿತ ಮಂಡಳಿ ಅಭಿಪ್ರಾಯ ಪಟ್ಟಿದೆ ಎಂದು ತಿಳಿಸಿರುವ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 47(3)(ಸಿ) ರೀತ್ಯಾ ಶ್ರೀ ಕೆ. ಶೇಷಪ್ಪ ಬಿನ್ ಮುನಿಶ್ಯಾಮಪ್ಪ, ಮಾಜಿ ಅಧ್ಯಕ್ಷರು, ದ್ಯಾಪಸಂದ್ರ ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಸಂಘ ನಿ. ಮಾಲೂರು ಇವರ ಮೇಲೆ ಆರೋಪಗಳು ಇಲ್ಲದ ಕಾರಣ ಇವರ ಸ್ಥಿರಾಸ್ತಿಗಳನ್ನು ಈ ಹಿಂದೆ ಆದೇಶಪೂರ್ವ ಜಪ್ತಿ ಆದೇಶದ ಕ್ರ.ಸಂ. ಎಆರ್ 49/ಎಂಕೆಟಿ/ಎಬಿಜೆ/6/2006–07, ದಿನಾಂಕ 27–06–2006 ರಲ್ಲಿ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಗಳನ್ನು ಆದೇಶಪೂರ್ವ ಜಪ್ತಿ ಆದೇಶದಿಂದ ಬಿಡುಗಡೆಗೊಳಿಸಲಾಗಿದೆ. ವಿವರಗಳು ಈ ಕೆಳಕಂಡಂತಿವೆ.

ಷೆಡ್ಯೂಲ್

| ಕ್ರಮ ಸಂ. | ಕಬ್ಜೆದಾರರ ಹೆಸರು ಮತ್ತು ವಿಳಾಸ | ಖಾತೆ ನಂ./ಹಿಸ್ಸೆ | ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1 | ಶ್ರೀ ಕೆ. ಶೇಷಪ್ಪ ಬಿನ್ ಮುನಿಶ್ಯಾಮಪ್ಪ ಕುಡಿಯನೂರು ಗ್ರಾಮ, ಮಾಲೂರು ತಾಲ್ಲೂಕು | 275/ಪಿ12 | 197 | 2.30 | ಖುಷ್ಕಿ |
| 2 | ಶ್ರೀ ಕೆ. ಶೇಷಪ್ಪ ಬಿನ್ ಮುನಿಶ್ಯಾಮಪ್ಪ ಕುಡಿಯನೂರು ಗ್ರಾಮ, ಮಾಲೂರು ತಾಲ್ಲೂಕು | 164 | 167 | 1.08.08 | – |

ಈ ಆದೇಶವನ್ನು ಈ ದಿನ ದಿನಾಂಕ 09–03–2012 ರಂದು ನನ್ನ ಸಹಿ ಮತ್ತು ಈ ಕಾರ್ಯಾಲಯದ ಮುದ್ರೆಯೊಂದಿಗೆ ನೀಡಲಾಗಿದೆ.

**ಸಿ. ಪ್ರಸಾದ ರೆಡ್ಡಿ,**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಕೋಲಾರ ಉಪ ವಿಭಾಗ, ಕೋಲಾರ.

**ಪಿ.ಆರ್. 567**

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,**

**ಬಹುಮಹಡಿಗಳ ಕಟ್ಟಡ, ಬೆಂಗಳೂರು–1**

**ಸಂಖ್ಯೆ : ಆಸಾನಿ/47/ಆಡಳಿತ–4/1995/148–98, ದಿನಾಂಕ 19–05–2012**

**ವಿಷಯ:** ಶ್ರೀ ಬಿ. ಬಾಬುಪ್ರಸಾದ್, ಬೆರಳಚ್ಚುಗಾರರು, ಇವರನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14 (ii) ರನ್ವಯ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ:**
1. ಜಂಟಿ ನಿರ್ದೇಶಕರು ಎ.ಜಿ.ಎಸ್. ವಿಭಾಗ ಇವರ ಟಿಪ್ಪಣಿ, ದಿನಾಂಕ 07–01–2009.
2. ಈ ಕಚೇರಿಯ ಜ್ಞಾಪನ ದಿನಾಂಕ 21–01–2010.
3. ಶ್ರೀ ಬಿ. ಬಾಬುಪ್ರಸಾದ್, ಅವರ ಮನವಿ ದಿನಾಂಕ : 22–03–2010.
4. ಈ ಕಚೇರಿಯ ಜ್ಞಾಪನ ದಿನಾಂಕ 07–05–2010.
5. ಶ್ರೀ ಬಿ. ಬಾಬುಪ್ರಸಾದ್, ಅವರ ಮನವಿ ದಿನಾಂಕ : 14–06–2010.
6. ಈ ಕಚೇರಿಯ ಆದೇಶ ಸಂಖ್ಯೆ : ಆಡಳಿತ/365/10–11, ದಿನಾಂಕ 11–08–2010.
7. ಸಹಾಯಕ ಪೋಲೀಸ್ ಕಮೀಷನರ್, ಚಿಕ್ಕಪೇಟೆ ಉಪ ವಿಭಾಗ, ಬೆಂಗಳೂರು ಇವರ ದಿನಾಂಕ 10.01.2011ರ ಪತ್ರ
8. ಕಾರಣ ಕೇಳುವ ನೋಟೀಸ್ ದಿನಾಂಕ 29–01–2011.
9. ಶ್ರೀ ಬಿ. ಬಾಬುಪ್ರಸಾದ್, ಅವರ ಮನವಿ ದಿನಾಂಕ : 17–03–2011.
10. ಈ ಕಚೇರಿಯ ಆದೇಶ ಸಂಖ್ಯೆ : ಆಡಳಿತ/116/11–12, ದಿನಾಂಕ 01–06–2011.
11. ಜಂಟಿ ನಿರ್ದೇಶಕರು, ಸಿ.ಎನ್.ಎಲ್. ವಿಭಾಗ ಇವರ ಟಿಪ್ಪಣಿ ದಿನಾಂಕ 23–07–2011.
12. ಈ ಕಚೇರಿಯ ಜ್ಞಾಪನ ದಿನಾಂಕ 14–10–2011.
13. ಶ್ರೀ ಬಿ. ಬಾಬುಪ್ರಸಾದ್, ಅವರ ಮನವಿ ದಿನಾಂಕ : 31–10–2011.
14. ಈ ಕಚೇರಿಯ ಅಂತಿಮ ನೋಟಿಸ್ ದಿನಾಂಕ 27–02–2012.
15. ಈ ಕಚೇರಿಯ ಕಾರಣ ಕೇಳುವ ನೋಟಿಸ್ ದಿನಾಂಕ 27–03–2012.
16. ದಿನಾಂಕ 27–04–2012 ರಂದು ವಿಜಯ ಕರ್ನಾಟಕ ಮತ್ತು ಪ್ರಜಾವಾಣಿ ದಿನಪತ್ರಿಕೆಯಲ್ಲಿ ಹೊರಡಿಸಲಾದ ಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ :**

ಈ ನಿರ್ದೇಶನಾಲಯದ ಎ.ಜಿ.ಎಸ್. ವಿಭಾಗದಲ್ಲಿ ಬೆರಳಚ್ಚುಗಾರರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ. ಬಾಬುಪ್ರಸಾದ್, ಅವರು ದಿನಾಂಕ 30–09–2009 ರಿಂದ ಕಚೇರಿಗೆ ಗೈರು ಹಾಜರಾಗಿರುತ್ತಾರೆಂದು ಉಲ್ಲೇಖ (1) ರ ಟಿಪ್ಪಣಿಯಲ್ಲಿ ಜಂಟಿ ನಿರ್ದೇಶಕರು (ಎ.ಜಿ.ಎಸ್.) ಅವರು ವರದಿ ಮಾಡಿರುತ್ತಾರೆ. ಅದಕ್ಕೆ ಸಂಬಂಧಿಸಿದಂತೆ ಉಲ್ಲೇಖ (2) ರ ಜ್ಞಾಪನದಲ್ಲಿ ಸದರಿ ನೌಕರರನ್ನು ಕೂಡಲೇ ಕಚೇರಿಗೆ ಹಾಜರಾಗುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಉಲ್ಲೇಖ (3)ರ ಮನವಿಯಲ್ಲಿ ಸದರಿಯವರು ದಿನಾಂಕ 31–03–2010ರ ವರೆಗೆ ವೈದ್ಯಕೀಯ ರಜೆ ಮಂಜೂರು ಮಾಡುವಂತೆ ಕೋರಿ ರಜಾ ಅರ್ಜಿ ಸಲ್ಲಿಸಿರುತ್ತಾರೆ. ಆದರೆ ಪುನಃ ಸದರಿಯವರು ದಿನಾಂಕ 01–04–2010 ರಂದು ಕಚೇರಿ ಕೆಲಸಕ್ಕೆ ಹಾಜರಾಗದೇ ಇರುವುದರಿಂದ ಉಲ್ಲೇಖ (4)ರ ಜ್ಞಾಪನ ಹೊರಡಿಸಿ ಕಚೇರಿ ಕೆಲಸಕ್ಕೆ ಕೂಡಲೇ ಹಾಜರಾಗತಕ್ಕದ್ದು ತಪ್ಪಿದ್ದಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದೆಂದು ಸೂಚಿಸಲಾಗಿತ್ತು.

ಸದರಿಯವರು ಪುನಃ ಉಲ್ಲೇಖ (5)ರ ಮನವಿಯಲ್ಲಿ ದಿನಾಂಕ 31-07-2010 ರವರೆಗೆ ರಜೆ ವಿಸ್ತರಿಸುವಂತೆ ಮನವಿ ಸಲ್ಲಿಸಿರುತ್ತಾರೆ. ಅದರಂತೆ ಸದರಿಯವರು ದಿನಾಂಕ 01-08-2010 ರಂದು ಕಚೇರಿಗೆ ಹಾಜರಾಗಬೇಕಾಗಿತ್ತು. ಆದರೆ ಯಾವುದೇ ಮಾಹಿತಿಯನ್ನು ಸಲ್ಲಿಸದೆ 315 ದಿನಗಳ ಗೈರು ಹಾಜರಾಗಿರುವುದರಿಂದ ಉಲ್ಲೇಖ (6)ರ ಈ ಕಚೇರಿ ಆದೇಶದಲ್ಲಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(iii) ರಂತೆ ಅವರ ವಿರುದ್ಧ ಇಲಾಖಾ ವಿಚಾರಣಾ ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಈ ಮಧ್ಯೆ ಉಲ್ಲೇಖ (7)ರ ಸಹಾಯಕ ಪೊಲೀಸ್ ಕಮೀಷನರ್, ಚಿಕ್ಕಪೇಟೆ, ಉಪ ವಿಭಾಗ, ಇವರ ಪತ್ರದಲ್ಲಿ ಅವರ ವಿರುದ್ಧ ಬೆಂಗಳೂರು ನಗರದ ಎ.ಸಿ.ಎಂ.ಎಂ. ನ್ಯಾಯಾಲಯದಲ್ಲಿ ಕ್ರಿಮಿನಲ್ ಕೇಸ್ ದಾಖಲಾಗಿದ್ದಲ್ಲದೆ ಅವರ ವಿರುದ್ಧ ದಸ್ತಗಿರಿ ವಾರೆಂಟ್ ಹೊರಡಿಸಲಾಗಿರುತ್ತದೆ ಎಂದು ವಿವರಿಸಿರುತ್ತಾರೆ. ಉಲ್ಲೇಖ (8) ರ ಕಾರಣ ಕೇಳುವ ಜ್ಞಾಪನದಲ್ಲಿ ಸದರಿಯವರ ವಿರುದ್ಧ ದೋಷಾರೋಪಣ ಪಟ್ಟಿ ತಯಾರಿಸಿ ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಿದ್ದರೂ ಸಹ ಅವರು 10 ತಿಂಗಳಷ್ಟು ವಿಳಂಬ ಮಾಡಿ ದಿನಾಂಕ 31-10-2011 ರಂದು ಸಲ್ಲಿಸಿದ ವಿವರಣೆಯಲ್ಲಿ "ನಾನು ಇನ್ನು ಮುಂದೆ ಗೈರು ಹಾಜರಾಗದೆ ಎಚ್ಚರಿಕೆಯಿಂದ ಕರ್ತವ್ಯ ನಿರ್ವಹಿಸುತ್ತೇನೆಂದು ವಿವರಿಸಿ ಇಲಾಖಾ ವಿಚಾರಣೆ ಕೈಬಿಡಬೇಕೆಂದು ಕೋರಿದ್ದನ್ನು ಮಾನವೀಯತೆಯಿಂದ ಪರಿಗಣಿಸಿ ಅವರ ವಿರುದ್ಧ ಏರ್ಪಡಿಸಬಹುದಾಗಿದ್ದ ವಿಚಾರಣೆಯನ್ನು ಕೈಬಿಟ್ಟು ಉಲ್ಲೇಖ (10)ರ ಆದೇಶದಲ್ಲಿ ಅವರನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಿದ್ದನ್ನು ರದ್ದುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಿ ಈ ಕಚೇರಿಯ ಸಿ.ಎನ್.ಎಲ್. ವಿಭಾಗಕ್ಕೆ ನಿಯೋಜಿಸಲಾಗಿತ್ತು. ಅದರಂತೆ ಸದರಿಯವರು ದಿನಾಂಕ 11-07-2011 ಕ್ಕೆ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ದಿನಾಂಕ **11-08-2010 ರಿಂದ 10-07-2011ರ ವರೆಗಿನ 334 ದಿನಗಳ** ಅಮಾನತ್ತಿನ ಅವಧಿಯು ಇತ್ಯರ್ಥವಾಗುವ ಮೊದಲೇ ಸದರಿಯವರು ಪುನಃ ದಿನಾಂಕ 12-10-2011 ರಿಂದ ಸುಮಾರು 167 ದಿನಗಳ ಅನಧಿಕೃತ ಗೈರು ಹಾಜರಾಗಿದ್ದನ್ನು ನಿಯಮಾನುಸಾರ ಪರಿಶೀಲಿಸಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ii) ರಲ್ಲಿ ಸಂಬಂಧಿಸಿದ ನೌಕರನು ತಲೆ ಮರೆಸಿಕೊಂಡಿದ್ದಲ್ಲಿ ನಿಯಮಗಳಲ್ಲಿ ಗೊತ್ತುಪಡಿಸಲಾದ ವಿಧಾನವನ್ನು ಅನುಸರಿಸದೆ ಸೂಕ್ತವೆಂದು ಭಾವಿಸಬಹುದಾದ ಆದೇಶವನ್ನು ಶಿಸ್ತು ಪ್ರಾಧಿಕಾರವು ಹೊರಡಿಸಬಹುದಾಗಿದೆಯಾದ್ದರಿಂದ ಸದರಿಯವರನ್ನು ಸರ್ಕಾರದ ಸೇವೆಯಿಂದ ಏಕೆ ವಜಾ ಮಾಡಬಾರದೆಂಬುದರ ಕುರಿತು ಅವರ ವಿವರಣೆಯನ್ನು ಒಂದು ವಾರದೊಳಗೆ ನೀಡುವಂತೆ ಉಲ್ಲೇಖ (14) & (15) ರ ಕಾರಣ ಕೇಳುವ ನೋಟೀಸಿನಲ್ಲಿ ಸೂಚಿಸಲಾಗಿತ್ತು. ಸದರಿ ಕಾರಣ ಕೇಳುವ ನೋಟಿಸನ್ನು /ಪತ್ರಗಳನ್ನು ಅವರೇ ಸ್ವತಃ ಸಲ್ಲಿಸಿದ್ದ ವಾಸದ ವಿಳಾಸಗಳಿಗೆ ಅಂಚೆ ಸ್ವೀಕೃತಿ ಪತ್ರದೊಂದಿಗೆ ಕಳುಹಿಸಿದ್ದು, ಅವುಗಳು ಜಾರಿಯಾಗದೆ ಹಿಂತಿರುಗಿ ಬಂದಿರುತ್ತದೆ. ಉಲ್ಲೇಖ (14) ಮತ್ತು (15)ರ ನೋಟೀಸ್‌ಗಳಿಗೆ ಸದರಿಯವರಿಂದ ಯಾವುದೇ ರೀತಿಯ ಪ್ರತಿಕ್ರಿಯೆಯು ಸ್ವೀಕೃತವಾಗದ ಕಾರಣ ಉಲ್ಲೇಖ (16) ರಲ್ಲಿ ಸದರಿಯವರು ಪತ್ರಿಕೆ ಪ್ರಕಟಣೆಗೊಂಡ 15 ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು ತಪ್ಪಿದ್ದಲ್ಲಿ ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗುವುದೆಂದು ಪತ್ರಿಕಾ ಪ್ರಕಟಣೆಯನ್ನು ವಿಜಯ ಕರ್ನಾಟಕ ಮತ್ತು ಪ್ರಜಾವಾಣಿ ದಿನಪತ್ರಿಕೆಗಳಲ್ಲಿ ದಿನಾಂಕ 27-04-2012 ರಂದು ಪ್ರಕಟಿಸಲಾಗಿತ್ತು. ಅದರಂತೆ ಸದರಿಯವರು ದಿನಾಂಕ 14-05-2012 ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ ಸದರಿಯವರು ಇದಾವುದಕ್ಕೂ ಸ್ಪಂದಿಸದೆ ಇರುವ ಕಾರಣದಿಂದ ಅವರು ತಲೆಮರೆಸಿಕೊಂಡಿದ್ದಾರೆಂದು ಪರಿಗಣಿಸಿ ಅವರನ್ನು ಸರ್ಕಾರದ ಸೇವೆಯಿಂದ ವಜಾಮಾಡುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ : ಆಡಳಿತ/86/2012-13**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ. ಬಾಬುಪ್ರಸಾದ್, ಬೆರಳಚ್ಚುಗಾರರಿಗೆ ಕರ್ತವ್ಯದಲ್ಲಿ ಆಸಕ್ತಿ ಇಲ್ಲದೇ ಮೇಲಿಂದ ಮೇಲೆ ಗೈರು ಹಾಜರಾಗುವ ಪ್ರವೃತ್ತಿ ಹೊಂದಿದ್ದು, ಯಾವುದೇ ಪ್ರಬಲ ಕಾರಣಗಳಿಲ್ಲದೆ, ಸರ್ಕಾರದ ಕರ್ತವ್ಯಕ್ಕೆ ದಿನಾಂಕ 30-09-2009 ರಿಂದ 10.08.2010 ಮತ್ತು 13-10-2011 ರಿಂದ ಈ ದಿನಾಂಕದವರೆಗೆ ಅನಧಿಕೃತ ಗೈರು ಹಾಜರಾಗಿರುವುದು ತೀವ್ರತರವಾದ ದುರ್ವರ್ತನೆಯಾಗಿರುವುದರಿಂದ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ii) ರ ಅನ್ವಯ, ಆತನು ತಲೆಮರೆಸಿಕೊಂಡಿದ್ದಾನೆಂದು ಪರಿಗಣಿಸಿ ಅದೇ ನಿಯಮಾವಳಿ ನಿಯಮ 11ರ ಅನ್ವಯ ಇಲಾಖಾ ವಿಚಾರಣೆ ಏರ್ಪಡಿಸದೇ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹೆಚ್.ಇ.ರಾಜಶೇಖರಪ್ಪ, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಆದ ನಾನು ಶ್ರೀ ಬಿ. ಬಾಬುಪ್ರಸಾದ್, ಬೆರಳಚ್ಚುಗಾರರು, ಕೇಂದ್ರ ಕಛೇರಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಈ ನಿರ್ದೇಶನಾಲಯದ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ.

**ಹೆಚ್.ಇ. ರಾಜಶೇಖರಪ್ಪ,**
ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

**ಪಿ.ಆರ್. 714**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು-52**

**ವಿಷಯ:** ಸಮಾಪನೆಗೊಂಡ ದಕ್ಷಿಣ ಕನ್ನಡ ಜಿಲ್ಲಾ ಗುಡಿ ಕೈಗಾರಿಕಾ ಸಹಕಾರ ಸಂಘ (ನಿ), ಮಂಗಳೂರು ಇದರ ನೋಂದಣಿ ರದ್ಧತಿ ಕುರಿತು.

ಉಲ್ಲೇಖ: 1) ಸಹಕಾರ ಸಂಘಗಳ ಉಪ ನಿಬಂಧಕರು, ದಕ್ಷಿಣ ಕನ್ನಡ ಜಿಲ್ಲಾ ಇವರ ಪತ್ರ ಸಂಖ್ಯೆ : ಡಿಆರ್‌ಪಿ/ಎಸ್–9/ಸಮಾಪನೆ/20/2003–04, ದಿನಾಂಕ 31–03–2011.

2) ಈ ಕಛೇರಿ ಸಮ ಸಂಖ್ಯೆಯ ಪತ್ರ ದಿನಾಂಕ 07–09–2011.

3) ಸಹಕಾರ ಸಂಘಗಳ ಉಪ ನಿಬಂಧಕರು, ದಕ್ಷಿಣ ಕನ್ನಡ ಜಿಲ್ಲೆ ಇವರ ಪತ್ರ ಸಂಖ್ಯೆ : ಡಿಆರ್‌ಪಿ/ಎಸ್–9/ಸಮಾಪನೆ/20/2003–04, ದಿನಾಂಕ 29–03–2012.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲಾ ಗುಡಿ ಕೈಗಾರಿಕಾ ಸಹಕಾರ ಸಂಘ (ನಿ), ಮಂಗಳೂರು ಈ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ದಕ್ಷಿಣ ಕನ್ನಡ ಜಿಲ್ಲೆ, ಉಲ್ಲೇಖ (3)ರ ಪತ್ರದ ಮೂಲಕ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಪರಿಶೀಲಿಸಲಾಗಿದ್ದು, ಸದರಿ ಸಂಘದ ಯಾವುದೇ ವರ್ಷದ ಲೆಕ್ಕ ಪರಿಶೋಧನಾ ವರದಿ ಲಭ್ಯವಿರುವುದಿಲ್ಲವೆಂದೂ ಮತ್ತು ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿಬಂಧಕರ ಅಭಿಲೇಖಾಲಯದ ದಾಖಲೆಗಳಲ್ಲಿ ಸದರಿ ಸಂಘದ ಲೆಕ್ಕ ಪರಿಶೋಧನಾ ವರದಿ ಲಭ್ಯವಿರುವುದಿಲ್ಲವೆಂದು ತಿಳಿಸಿರುವುದಾಗಿಯೂ, ಸಂಘದ ಯಾವುದೇ ದಾಖಲಾತಿಗಳು ಪತ್ತೆಯಾಗದ ಕಾರಣ ಆಸ್ತಿ ಜವಾಬ್ದಾರಿ ವಿಲೇವಾರಿಯಾಗಿದೆ ಎಂದು ಸಮಾಪಕರು ತಿಳಿಸಿರುವುದರಿಂದ ಸಂಘದ ನೋಂದಣಿ ರದ್ದತಿಗೆ ಸಹಕಾರ ಸಂಘಗಳ ಉಪ ನಿಬಂಧಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು ಶಿಫಾರಸ್ಸು ಮಾಡಿರುತ್ತಾರೆ. ಸಂಘದ ನೋಂದಣಿ ರದ್ದತಿ ಕುರಿತು ಸಾರ್ವಜನಿಕರಿಂದ ಆಕ್ಷೇಪಣೆ ಇರುವ ಬಗ್ಗೆ ಪ್ರಚಲಿತ ದಿನಪತ್ರಿಕೆಯಲ್ಲಿ ಜಾಹಿರಾತು ನೀಡಿದ್ದರೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲವೆಂದೂ, ಸದರಿ ಸಂಘಕ್ಕೆ ಬರತಕ್ಕ ಹಾಗೂ ಕೊಡತಕ್ಕ ಬಾಬ್ತುಗಳೂ ಏನೂ ಇಲ್ಲದಿರುವುದರಿಂದ, ಸದರಿ ಸಂಘದ ನೋಂದಣಿ ಸಂಖ್ಯೆ 428 ದಿನಾಂಕ 08–03–1960 ಇದನ್ನು ರದುಗೊಳಿಸಲು ಸಂಘದ ಸಮಾಪಕರು ತಮ್ಮ ದಿನಾಂಕ 31–12–2011ರ ಸಭಾ ನಡವಳಿಯಲ್ಲಿ ತೀರ್ಮಾನಿಸಿರುತ್ತಾರೆ. ಈ ಕುರಿತು ಸಹಕಾರ ಸಂಘಗಳ ಉಪ ನಿಬಂಧಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಆಡಳಿತಾತ್ಮಕ ದೃಷ್ಟಿಯಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಅನಿ. ಕೈಸಸಂ–2/87/ನೋಂ.ರ/2011–12, ದಿನಾಂಕ: 21–05–2012.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಪರಿಗಣಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ/139/ಸಿಎಲ್‌ಎಂ/2010, ದಿನಾಂಕ 04–07–2011 ರಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 75 ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಸಮಾಪನೆಗೊಂಡ ದಕ್ಷಿಣ ಕನ್ನಡ ಜಿಲ್ಲಾ ಗುಡಿ ಕೈಗಾರಿಕಾ ಸಹಕಾರ ಸಂಘ (ನಿ), ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇದರ ನೋಂದಣಿ ಸಂಖ್ಯೆ : 428 ದಿನಾಂಕ 08.03.1960 ಇದನ್ನು ರದ್ದುಗೊಳಿಸಿರುತ್ತೇನೆ. ಈ ರದ್ದತಿ ಆದೇಶದ ದಿನಾಂಕದಿಂದ ಸದರಿ ಸಂಘದ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸತಕ್ಕದ್ದು ಮತ್ತು ಈ ಸಂಘವು ಅಸ್ತಿತ್ವದಲ್ಲಿ ಇಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಎಲ್ಲಾ ದಸ್ತಾವೇಜುಗಳನ್ನು ಸಂಬಂಧಿಸಿದ ಸಹಕಾರ ಸಂಘಗಳ ಉಪ ನಿಬಂಧಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಹಸ್ತಾಂತರಿಸಲು ಸಮಾಪಕರಿಗೆ ನಿರ್ದೇಶಿಸಲಾಗಿದೆ.

ಈ ಕಛೇರಿ ಆದೇಶವನ್ನು ದಿನಾಂಕ 05–2012 ರಂದು ನನ್ನ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

**ಬಿ.ಹೆಚ್. ಮಂಜಪ್ಪ,**
ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಹೈನುಗಾರಿಕೆ)

**ಪಿ.ಆರ್. 719**

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ,**

**2ನೇ ಮಹಡಿ, ಮಿನಿ ವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೆಬ್ಬೂರು, ತುಮಕೂರು ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ : ಸನಿ32/ಸಮಾಪನೆ/3/2011–12, ದಿನಾಂಕ: 27–3–2012.

**ಪ್ರಸ್ತಾವನೆ :**

ಸ್ಥಗಿತಗೊಂಡಿರುವ ಹಾಲು ಉತ್ಪಾಕದರ ಸಹಕಾರ ಸಂಘ ನಿ., ಹೆಬ್ಬೂರು, ತುಮಕೂರು ತಾಲ್ಲೂಕು ಈ ಸಂಘವು ಎಆರ್‌ಟಿ 4366/1976-77 ದಿನಾಂಕ 16-10-1997 ರಲ್ಲಿ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರು ಇವರಲ್ಲಿ ನೋಂದಣಿಯಾಗಿದ್ದು ಇದರ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿದ್ದು 17 ಗ್ರಾಮಗಳ ವ್ಯಾಪ್ತಿಗೆ ಒಳಪಟ್ಟಿರುತ್ತದೆ.

ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿದ್ದು ಆಡಳಿತ ಮಂಡಳಿ ಅಸ್ತಿತ್ವದಲ್ಲಿರುವ ಬಗ್ಗೆ ಯಾವುದೇ ಮಾಹಿತಿಯು ಲಭ್ಯವಾಗಿರುವುದಿಲ್ಲವೆಂದು ಉಲ್ಲೇಖಿತ ಪತ್ರದಲ್ಲಿ ಸಹಾಯಕ ನಿಬಂಧಕರು ತಿಳಿಸಿದ್ದು, ದಿನಾಂಕ 8-11-2011ರ ಕನ್ನಡಪ್ರಭ ದಿನಪತ್ರಿಕೆಯಲ್ಲಿ ಜಾಹೀರಾತು ನೀಡಿ ದಿನಾಂಕ 20-11-2011ರ ಗಡುವು ನೀಡಿ ಆಡಳಿತ ಮಂಡಳಿ ಸದಸ್ಯರಾಗಲೀ ಸಾರ್ವಜನಿಕರಿಂದಾಗಲೀ ಸಂಘದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸಲು ಸೂಚಿಸಿದ್ದು ಈ ಕುರಿತು ಸಂಘದ ಆಡಳಿತ ಮಂಡಳಿ ಸದಸ್ಯರು ಅಥವಾ 14 ಗ್ರಾಮಗಳ ಸಾರ್ವಜನಿಕರಿಂದಾಗಲೀ ಸಲ್ಲಿಸಲು ಜಾಹೀರಾತಿನಲ್ಲಿ ಸೂಚಿಸಿದ್ದರೂ ಈ ತಹಲ್‌ವರೆಗೆ ಯಾರಿಂದಲೂ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಈ ಸಂಘದಿಂದ ಸಾರ್ವಜನಿಕರಿಗಾಗಲೀ ಸದಸ್ಯರಿಗಾಗಲೀ ಯಾವುದೇ ಉಪಯೋಗವಿರುವುದಿಲ್ಲವೆಂಬ ಅಂಶವನ್ನು ಮನಗಂಡು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/ಸಿಆರ್/90/2012-13, ದಿನಾಂಕ: 23-04-2012.**

ಶ್ರೀ ಆರ್. ಲೋಕೇಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಹಾಗೂ ಸರ್ಕಾರದ ಅಧಿಸೂಚನೆ ಸಂ.ಸಿಒ:139:ಸಿಎಲ್‌ಎಂ:2010-11, ದಿನಾಂಕ 17-2-2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೆಬ್ಬೂರು, ತುಮಕೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ ಹೆಚ್. ನಾಗರಾಜ್ ಸಹಕಾರ ಸಂಘಗಳ ನಿರೀಕ್ಷಕರು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣ ಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತೆಯ ಮೇರೆಗೆ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ 23-04-2012 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು

**ಪಿ.ಆರ್. 720**

**ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು-1**

**ತಿದ್ದುಪಡಿ ಆದೇಶ**

**ಸಂಖ್ಯೆ : ಸಾಮಾನ್ಯ/ಮಾಹ/73/2011-12 (2005-06), ದಿನಾಂಕ 14-05-2012**

**ವಿಷಯ:** ಮಾಹಿತಿ ಹಕ್ಕು ಅಧಿನಿಯಮ 2005ರಡಿ ಸಾರ್ವಜನಿಕ ಪ್ರಾಧಿಕಾರಗಳಿಗೆ ಸಾರ್ವಜನಿಕ ಮಾಹಿತಿ ಅಧಿಕಾರಿ/ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸುವ ಬಗ್ಗೆ.

**ಉಲ್ಲೇಖ:**
1. ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005.
2. ಸರ್ಕಾರದ ಆದೇಶ ಸಂಖ್ಯೆ : ಕೃತೋಇ/59/ಕೃತೋಸ/2005, ದಿನಾಂಕ 8-9-2005.
3. ಇದೇ ಸಮ ಸಂಖ್ಯೆ ಆದೇಶ ದಿನಾಂಕ 17-9-2005, 7-9-2006 ಮತ್ತು 23-6-2011.

ಉಲ್ಲೇಖ (3)ರ ಇದೇ ಸಮ ಸಂಖ್ಯೆ ತಿದ್ದುಪಡಿ ಆದೇಶ ದಿನಾಂಕ 23-6-2011 ರಲ್ಲಿನ ಸಾರ್ವಜನಿಕ ಮಾಹಿತಿ ಅಧಿಕಾರಿ ಕಾಲಂ ನ ಕ್ರಮಸಂಖ್ಯೆ (1)ರ ಅಪರ ನಿರ್ದೇಶಕರು (ಆಡಳಿತ) ಎಂಬುದನ್ನು ಜಂಟಿ ನಿರ್ದೇಶಕರು (ಆಡಳಿತ) ಎಂಬುದಾಗಿ ಮತ್ತು ಕ್ರಮ ಸಂಖ್ಯೆ (2)ರ ಕೊನೆಯಲ್ಲಿನ ಅಪರ ನಿರ್ದೇಶಕರು (ಆಡಳಿತ), ಬೆಂಗಳೂರು ಎಂಬುದನ್ನು ಅಪರ ಕೃಷಿ ನಿರ್ದೇಶಕರು (ಬೆಳೆ ಅಭಿವೃದ್ಧಿ ಯೋಜನೆ), ಬೆಂಗಳೂರು ಎಂಬುದಾಗಿ ಓದಿಕೊಳ್ಳುವುದು.

**ಪಿ.ಆರ್. 722**

ಕೃಷಿ ಆಯುಕ್ತರು (ಪ್ರ)

## ಲೋಕೋಪಯೋಗಿ ಇಲಾಖೆ

**ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ – 2005**

**ಭಾಗ–1**

**ಸಂಖ್ಯೆ : ಲೋಇ/ ಸಕಾನಿಇಂ/ಗುಭಉವಿಬೆ–ಸಿ–1, 2012–13, ದಿನಾಂಕ 16–05–2012**

ಸಹಾಯಕ ಕಾರ್ಯನಿರ್ವಾಯಕ ಇಂಜಿನೀಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಗುಣ ಭರವಸೆ ಉಪ ವಿಭಾಗ, ಬೆಳಗಾವಿ ಕಚೇರಿಯ ಮಾಹಿತಿ ಹಕ್ಕು ನಿಯಮ –2005ರ ಅಡಿಯಲ್ಲಿ ಈ ಕಚೇರಿಯಿಂದ ನೀವು ದಾಖಲಾತಿಗಳನ್ನು ಪಡೆಯಬಹುದು.

1) ದಾಖಲಾತಿಗಳನ್ನು 15 ದಿನಗಳಲ್ಲಿ ನೀಡಲಾಗುವುದು (ರಜಾ ದಿನಗಳನ್ನು ಹೊರತುಪಡಿಸಿ)

2) ಈ ಕಚೇರಿಯಲ್ಲಿ ಮಾಹಿತಿ ದಾಖಲಾತಿಗಳನ್ನು ನೀಡುವ ಅಧಿಕಾರಿಗಳು

| ಕ್ರಮ ಸಂಖ್ಯೆ | ಅಧಿಕಾರಿಗಳು (ಶ್ರೀಯುತರು) | ಹುದ್ದೆ | ನಿರ್ವಹಿಸುತ್ತಿರುವ ಉಸ್ತುವಾರಿ |
|---|---|---|---|
| 1 | ಶ್ರೀ ವಿ.ಎಸ್. ಪೀರಜಾದೆ | ಸಹಾಯಕ ಇಂಜಿನೀಯರ್ (ಭಾಗ–2) | ತಾಂತ್ರಿಕ ಶಾಖೆಯ ಉಸ್ತುವಾರಿ |
| 2 | ಶ್ರೀಮತಿ ಆರ್.ಪಿ. ಮಾಚಾ | ಪ್ರಥಮ ದರ್ಜೆ ಸಹಾಯಕರು | ಆಡಳಿತ ಶಾಖೆಯ/ಲೆಕ್ಕ ಪತ್ರಗಳ ಮೇಲ್ವಿಚಾರಣೆ |

**ಸಕ್ಷಮ ಪ್ರಾಧಿಕಾರ :**

ಶ್ರೀ ಎಸ್.ವಿ. ಹೊಸಪೇಟಿ, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಬೆಳಗಾವಿ

**ಮೇಲ್ಮನವಿ ಪ್ರಾಧಿಕಾರ :**

ಶ್ರೀ ಕೃಷ್ಣಾಜಿ ಚವಾಣ, ಕಾರ್ಯನಿರ್ವಾಹಕ ಇಂಜಿನೀಯರ್
ಲೋ ಬಂ ಒ ಜ ಸಾ ಇಲಾಖೆ, ಗುಣ ಭರವಸೆ ವಿಭಾಗ, ಧಾರವಾಡ

**ಮೇಲಿನ ಅಧಿಕಾರಿಗಳು ಸಹಕರಿಸದೇ ಇದ್ದ ಪಕ್ಷದಲ್ಲಿ ದೂರನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು :**

ಶ್ರೀ ಎಂ ನಾರಾಯಣ, ಅಧೀಕ್ಷಕ ಅಭಿಯಂತರರು,
ಲೋ ಬಂ ಒ ಜ ಸಾ ಇಲಾಖೆ, ಗುಣ ಭರವಸೆ ವೃತ್ತ, ಧಾರವಾಡ

ಈ ಕಾಯ್ದೆಯ ಅಧಿನಿಯಮವು ಮತ್ತು ನಿಯಮಗಳ ವಿವರಗಳು ಸರ್ಕಾರಿ ಮುದ್ರಣಾಲಯ, ಬೆಂಗಳೂರು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಅಂಗೀಕೃತ ಪುಸ್ತಕ ವ್ಯಾಪಾರಿಗಳಲ್ಲಿ ಮಾರಾಟಕ್ಕೆ ದೊರೆಯುತ್ತವೆ.

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರು,**
ಲೋ. ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಗುಣ ಭರವಸೆ ಉಪ ವಿಭಾಗ, ಬೆಳಗಾವಿ

**ಭಾಗ–2**

**ರಚನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು**

ಲೋಕೋಪಯೋಗಿ ಇಲಾಖೆ, ಗುಣ ಭರವಸೆ ಉಪ ವಿಭಾಗ, ಬೆಳಗಾವಿ ಇದು ಬೆಳಗಾವಿಯ ಕಿಲ್ಲೆಯಲ್ಲಿ ಸರಕಾರಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. ಈ ಉಪ ವಿಭಾಗವು ಲೋ. ಇಲಾಖೆ, ಬೆಳಗಾವಿ ವೃತ್ತದ ಕಾರ್ಯ ವ್ಯಾಪ್ತಿಯನ್ನು ಹೊಂದಿದೆ. ಈ ಉಪ–ವಿಭಾಗದ ಪ್ರಭಾರವನ್ನು ಶ್ರೀ ಎಸ್.ವಿ. ಹೋಸಪೇಟಿ, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರು ಹೊಂದಿದ್ದಾರೆ. ಈ ಕಾರ್ಯಾಲಯದಲ್ಲಿ ಮೂವರು ಸಹಾಯಕ ಇಂಜಿನೀಯರ್‌ರರು, ವಿಭಾಗ–1, ಮೂವರು ಸಹಾಯಕ ಇಂಜಿನೀಯರ್ ವಿಭಾಗ–2 ಹಾಗೂ ಅನೇಕ ಸಮೂಹ 'ಸಿ' ಮತ್ತು 'ಡಿ' ವರ್ಗದ ನೌಕರರ ಮಂಜೂರಾದ ಹುದ್ದೆಗಳು ಇರುತ್ತವೆ.

**ಲೋಕೋಪಯೋಗಿ ಇಲಾಖೆ, ಗುಣ ಭರವಸೆ ಉಪ ವಿಭಾಗದ ಪ್ರಕಾರ್ಯಗಳು**

ಈ ಉಪ ವಿಭಾಗವು ಲೋ ಇ ಬೆಳಗಾವಿ ವೃತ್ತದಡಿ ಬರುವ ನಾಲ್ಕು ವಿಭಾಗಗಳಾದ ಬೆಳಗಾವಿ, ಚಿಕ್ಕೋಡಿ, ವಿಜಾಪೂರ ಹಾಗೂ ಬಾಗಲಕೋಟೆಗಳಡಿಯ ರಸ್ತೆ, ಸೇತುವೆ, ಕಟ್ಟಡ ಕಾಮಗಾರಿಗಳ ಗುಣಪರೀಕ್ಷೆ ಮಾಡಿ ವರದಿ ನೀಡುವುದು.

**ಈ ಕಾರ್ಯಾಲಯದ ವ್ಯಾಪ್ತಿಗೆ ಈ ಕೆಳಕಂಡ ವಿಷಯಗಳು ಬರುತ್ತವೆ**

ಎ) ರಸ್ತೆ : ಸೇತುವೆ ಹಾಗೂ ಕಟ್ಟಡ ಕಾಮಗಾರಿಗಳ ಸಾಮಗ್ರಿಗಳ ಗುಣಪರೀಕ್ಷೆ ಕೈಗೊಳ್ಳುವುದು.

(1) ಕಚ್ಚಾ ಸಾಮಗ್ರಿಗಳ ಪರೀಕ್ಷೆ (2) ಪೂರ್ತಿಗೊಂಡ ಕಾಮಗಾರಿಯ ಪರೀಕ್ಷೆ (ಕಾಂಕ್ರೀಟ್ ಮತ್ತು ಮಣ್ಣಿನ ಏರಿ ಇತ್ಯಾದಿ)

(3) ಕಾಮಗಾರಿಯನ್ನು ಕೈಗೊಳ್ಳುವ ವಿಧಾನ.

ಬಿ) ರಾಜ್ಯ ಹೆದ್ದಾರಿ ವರದಿಗಳು : ಜಿಲ್ಲಾ ಮುಖ್ಯ ರಸ್ತೆಗಳ ಸ್ಥಿತಿಗತಿ ಸಮೀಕ್ಷೆ, ಸಿಬಿಆರ್ ಹಾಗೂ ಎಸ್‌ಬಿಸಿ ಪರೀಕ್ಷಾ ವರದಿಗಳು.

ಸಿ) ಕಚೇರಿಯಲ್ಲಿಯ ಅಧಿಕಾರಿಗಳ ಹಾಗೂ ಸಿಬ್ಬಂದಿಯವರ ಸೇವಾ ವಿಷಯಗಳಿಗೆ ಸಂಬಂಧಿಸಿದ ಕುರಿತು ಪತ್ರ ವ್ಯವಹಾರ ಹಾಗೂ ಸೇವಾ ಪುಸ್ತಕಗಳ ನಿರ್ವಹಣೆ.

ಡಿ) ಅಧಿಕಾರಿಗಳ ಹಾಗೂ ಸಿಬ್ಬಂದಿಗಳ ವೇತನ, ಭತ್ಯೆಗಳ ಬಟವಾಡೆ.

ಇ) ವೇತನ, ಪ್ರಯಾಣ ಭತ್ಯೆ, ಹಬ್ಬದ ಮುಂಗಡ, ಸಾಮಾನ್ಯ ಭವಿಷ್ಯ ನಿಧಿ, ಮಂಜೂರಾತಿ ಹಾಗೂ ಬಟವಡೆ.

ಎಫ್) ಎಲ್‌ಎಕ್ಯೂ ಹಾಗೂ ಎಲ್‌ಸಿ ಕ್ಯೂಗಳ ನಿರ್ವಹಣೆ.

ಜಿ) ನ್ಯಾಯಾಲಯ ಹಾಗೂ ಇಲಾಖಾ ವಿಚಾರಣೆಗಳ ಪ್ರಕರಣ ನಿರ್ವಹಣೆ.

ಎಚ್) ಖಾಲಿ ಹುದ್ದೆಗಳಿಗೆ ನಿಯುಕ್ತಿಗೊಳಿಸುವ ಕುರಿತು ಪತ್ರ ವ್ಯವಹಾರ.

ಐ) ನಿವೃತ್ತಿ ವೇತನ ಪ್ರಕರಣಗಳು.

ಜೆ) ಸಿಬ್ಬಂದಿ ಕೆಲಸದ ಅನುದಾನದ ಅಂದಾಜು ಹಾಗೂ ಎಫ್‌ಆರ್‌ಐ ತಯಾರಿಸುವುದು.

ಕೆ) ಅನುದಾನ ಬಿಡುಗಡೆ ಪತ್ರ ವ್ಯವಹಾರ.

ಎಲ್) ಲೆಕ್ಕಪತ್ರ ಶಾಖೆಯ ಪತ್ರ ವ್ಯವಹಾರ.

**ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್‌ರು,**
ಲೋ. ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಗುಣ ಭರವಸೆ ಉಪ ವಿಭಾಗ, ಬೆಳಗಾವಿ

**ಪಿ.ಆರ್. 723**

## ಗ್ರಾಮೀಣಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

### ಅಧಿಸೂಚನೆ

### ಸಂಖ್ಯೆ : ಗ್ರಾಅಪ 41 ಎಸ್‌ಜಿವೈ 2011 (ಎ2), ಬೆಂಗಳೂರು, ದಿನಾಂಕ : 10-04-2012

**ವಿಷಯ:** ರಾಜ್ಯದಲ್ಲಿ ಕೇಂದ್ರ ಪುರಸ್ಕೃತ - ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್‌ಆರ್‌ಎಲ್‌ಎಂ) ಗೆ ಅಜೀವಿಕಾ ಯೋಜನೆಯ ಹೆಸರನ್ನು "ಸಂಜೀವಿನಿ" ಎಂದು ಬದಲಾಯಿಸುವ ಕುರಿತು.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಅ.ಸ.ಪತ್ರ ಸಂಖ್ಯೆ:ಎಂ-13015/01/2010/ಎಸ್‌ಜಿಎಸ್‌ವೈ-1, ದಿನಾಂಕ:21-06-2010.
2. ಕೇಂದ್ರ ಸರ್ಕಾರದ ಆದೇಶ ಸಂಖ್ಯೆ:ಜೆ-11011/09-2011 ಎಸ್‌ಜಿಎಸ್‌ವೈ-1, (ಎಫ್‌ಟಿಎಸ್-14945) ದಿನಾಂಕ:05-10-2011.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 25 ಎಸ್‌ಜಿವೈ 2011 (ಎ-1) ದಿನಾಂಕ:10-10-2011.
4. ಸಂಖ್ಯೆ:ಗ್ರಾಅಪ 42 ಎಸ್‌ಜಿವೈ 2011(ಎ-1) ದಿನಾಂಕ:27-03-2012.

ದಿನಾಂಕ: 07-02-2012ರಂದು ನಡೆದ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನ ಸಂಸ್ಥೆಯ (ಕೆಎಸ್‌ಆರ್‌ಎಲ್‌ಪಿಎಲ್) ಪ್ರಥಮ ಕಾರ್ಯನಿರ್ವಾಹಕ ಸಭೆಯ ನಡವಳಿಯಂತೆ (ಉಲ್ಲೇಖ 4) ರಾಜ್ಯದಲ್ಲಿ ಕೇಂದ್ರ ಪುರಸ್ಕೃತ ಆಜೀವಿಕ - ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್‌ಆರ್‌ಎಲ್‌ಎಂ) ನ ಯೋಜನೆಯನ್ನು ಅನುಷ್ಠಾನಗೊಳಿಸಲು **"ಸಂಜೀವಿನಿ"** ಎಂಬ ಹೆಸರನ್ನು ಅನುಮೋದಿಸಿದೆ. ಆದುದರಿಂದ, ಇನ್ನು ಮುಂದೆ ಎಲ್ಲಾ ಸರ್ಕಾರದ ದಾಖಲಾತಿಗಳಲ್ಲಿ, ಪತ್ರ ವ್ಯವಹರಿಸುವಾಗ ಹಾಗೂ ಯೋಜನೆಯನ್ನು ಅನುಷ್ಠಾನಗೊಳಿಸುವ ಎಲ್ಲಾ ಹಂತಗಳಲ್ಲಿ **"ಸಂಜೀವಿನಿ"** ಎಂಬ ಹೆಸರನ್ನೇ ಉಪಯೋಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ: ಅಮಿತಾ ಪ್ರಸಾದ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಪಿ.ಆರ್. 765**

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ

**ಸಂಖ್ಯೆ : ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–52/2005–06, ದಿನಾಂಕ : 23–5–2012.**

**ವಿಷಯ :** ಸ್ಥಗಿತಗೊಂಡಿರುವ ಆದರ್ಶ ಕೈಗಾರಿಕಾ ಸಹಕಾರ ಸಂಘ, ನಿ, ಹರಿಹರ, ದಾವಣಗೆರೆ–ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ, ಇವರ ಪತ್ರ ಸಂಖ್ಯೆ : ಸ.ಅ.ಹ/ಸಮಾಪನೆ/ಆದರ್ಶ/08–09, ದಿನಾಂಕ: 17–7–2008.
2. ಈ ಕಛೇರಿ ಸಮಸಂಖ್ಯೆ: ಕಾರಣಕೇಳಿ ತಿಳುವಳಿಕೆ ಪತ್ರ ದಿನಾಂಕ: 12–3–2008.

**ಪ್ರಸ್ತಾವನೆ :**

ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ, ಇವರು ಉಲ್ಲೇಖ (1) ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 06 ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ. ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸು ನೀಡಿದ್ದು. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ/139: ಸಿಎಲ್ಎಂ. : 2010, ದಿನಾಂಕ : 17–2–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಗುರುಸ್ವಾಮಿ, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಆದರ್ಶ ಕೈಗಾರಿಕಾ ಸಹಕಾರ ಸಂಘ ನಿ., ಹರಿಹರ, ದಾವಣಗೆರೆ ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಹರಿಹರ, ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ : 23–5–2012 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಸಹಕಾರ ಸಂಘಗಳ ಉಪನಿಬಂಧಕರು,**
ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 733**

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ

**ಸಂಖ್ಯೆ : ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್– /2011–12, ಬೆಂಗಳೂರು, ದಿನಾಂಕ : 23–5–2012.**

**ವಿಷಯ :** ಸ್ಥಗಿತಗೊಂಡಿರುವ ಸತ್ಯನಾರಾಯಣಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸತ್ಯನಾರಾಯಣಪುರ, ಹರಿಹರ ತಾ. ದಾವಣಗೆರೆ–ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ–31/ಸ್ಥಗಿತ/ಸಿಆರ್–15/2011–12, ದಿನಾಂಕ : 28–3–2012.
2. ಈ ಕಛೇರಿ ಸಮಸಂಖ್ಯೆ : ಕಾರಣಕೇಳಿ ತಿಳುವಳಿಕೆ ಪತ್ರ ದಿನಾಂಕ : 19–3–2012.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1) ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 03 ವರ್ಷಗಳಿಂದ

ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ. ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸು ನೀಡಿದ್ದು. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ/139: ಸಿಎಲ್ಎಂ. : 2010, ದಿನಾಂಕ : 17–2–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಗುರುಸ್ವಾಮಿ, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಸತ್ಯನಾರಾಯಣಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸತ್ಯನಾರಾಯಣಪುರ, ಹರಿಹರ–ತಾ, ದಾವಣಗೆರೆ ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಹರಿಹರ, ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ : 23–5–2012 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಸಹಕಾರ ಸಂಘಗಳ ಉಪನಿಬಂಧಕರು,**
ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 734**

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ

**ಸಂಖ್ಯೆ : ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–10/2005–06, ಬೆಂಗಳೂರು, ದಿನಾಂಕ : 23–5–2012.**

**ವಿಷಯ :** ಸ್ಥಗಿತಗೊಂಡಿರುವ ಸಿಟಿ ಪತ್ತಿನ ಸಹಕಾರ ಸಂಘ, ನಿ, ಹರಿಹರ, ದಾವಣಗೆರೆ–ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ. ಇವರ ಪತ್ರ ಸಂಖ್ಯೆ: ಸನಿ21/ಸಮಾಪನೆ/ಸಿಆರ್– /2008–09, ದಿನಾಂಕ : 7–10–2011.
2. ಈ ಕಛೇರಿ ಸಮಸಂಖ್ಯೆ : ಕಾರಣಕೇಳಿ ತಿಳುವಳಿಕೆ ಪತ್ರ ದಿನಾಂಕ : 26–9–2008.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1) ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 05 ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ. ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸು ನೀಡಿದ್ದು. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ/139: ಸಿಎಲ್ಎಂ. : 2010, ದಿನಾಂಕ : 17–2–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಗುರುಸ್ವಾಮಿ, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಸಿಟಿ ಪತ್ತಿನ ಸಹಕಾರ ಸಂಘ ನಿ., ಹರಿಹರ, ದಾವಣಗೆರೆ ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ

ಅಧಿಕಾರಿಗಳು, ಹರಿಹರ, ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ : 23–5–2012 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಸಹಕಾರ ಸಂಘಗಳ ಉಪನಿಬಂಧಕರು,**
ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 735**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದ.ಕ. ಉಪ ವಿಭಾಗ–1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ

**ಸಂಖ್ಯೆ : ಡಬ್ಲ್ಯೂ ಸಿಎ/ಸಿಆರ್–14/2012ಎಫ್**

**ಅಧಿಸೂಚನೆ**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಇಸುಬು, ತಂದೆ ಬಿ. ಶೇಕಬ್ಬ<br>2. ಶ್ರೀಮತಿ ಅಮೀನಮ್ಮ ಇಸುಬು ಅವರ ಮಡದಿ<br>3. ಸಲೀಂ ಮಗ ಇಸುಬು<br>4. ರಹೀಂ ಮಗ ಇಸುಬು<br>5. ಮಾಸ್ಟರ್ ಹಕೀಂ ಮಗ ಇಸುಬು<br>6. ಮಾಸ್ಟರ್ ಮಹಮ್ಮದ್ ಮಿಸ್ವಾರ್ ಮಗ ಇಸುಬು ಸಾನಹಗುಡ್ಡೆ ಮನೆ, ಪೆರಾಡಿ, ಬೆಳ್ತಂಗಡಿ ತಾಲ್ಲೂಕು, ದ.ಕ. ಜಿಲ್ಲೆ. | | 1. ನಿತ್ಯಾನಂದ ಸಾಲಿಯಾನ್ ತಂದೆ : ರಾಮ ಪೂಜಾರಿ ವಾಸ : ಶ್ರೀನಿಧಿ, ಗಾಂಧಿನಗರ, ಮೂಡಬಿದ್ರೆ, ಮಾರ್ಪಾಡಿ ಗ್ರಾಮ ಮಂಗಳೂರು, ದ.ಕ.<br>2. ದಿ ನ್ಯಾಷನಲ್ ಇನ್ಸುರೆನ್ಸ್ ಕಂಪನಿ ಲಿ,. ಮೂಡಬಿದ್ರೆ, ಮಂಗಳೂರು ದ.ಕ. |

ಅರ್ಜಿದಾರನಾದ ಶ್ರೀ ಇಸುಬು ಇವರು ತಮ್ಮ ಮಗನಾದ ಶ್ರೀ ಕರೀಂ (ಕ್ಲೀನರ್) ಇವರು 1ನೇ ಪ್ರತಿವಾದಿಗಳಾದ ಶ್ರೀ ನಿತ್ಯಾನಂದ ಸಾಲಿಯಾನ್ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ : 22–11–2011 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು. ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟನೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
ದ.ಕ. ಉಪ ವಿಭಾಗ–1, ಮಂಗಳೂರು.

**ಪಿ.ಆರ್. 747**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದ.ಕ. ಉಪ ವಿಭಾಗ–1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ

**ಸಂಖ್ಯೆ : ಡಬ್ಲ್ಯೂ ಸಿಎ/ಸಿಆರ್–15/2012ಎಫ್, ದಿನಾಂಕ : 28–5–2012.**

**ಅಧಿಸೂಚನೆ**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀ ಕೆ. ನಾಗರಾಜ್ ಮಗ ಕೆ. ಕಾಲಿಮುತ್ತು,<br>2. ಶ್ರೀಮತಿ ಎನ್. ರಾಜತಿ ಹೆಂಡತಿ ಕೆ. ನಾಗರಾಜ್ R/at. 17/14, ಪಳನಿ ಅಪ್ಪನ್ ಸ್ಟ್ರೀಟ್ Kottoor Salai Pollachi Post ಕೋಯಂಬತ್ತೂರು ಜಿಲ್ಲೆ, ತಮಿಳುನಾಡು–642001. | | 1. ಶ್ರೀ ಎನ್.ಎಸ್. ಚಕ್ರವರ್ತಿ, ಮಗ ಎನ್. ಶಾಂತಕುಮಾರ್ ನಂ. 1 ಕನ್ನಗಿ ಸ್ಟ್ರೀಟ್ ಮಹಾಲಿಂಗಪುರಮ್ Pollachi ಜಿಲ್ಲೆ ಕೊಯಂಬತ್ತೂರು ತಮಿಳುನಾಡು–642001.<br>2. ದಿ ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ. ಲಿ. 11/2, ಕೆ.ಟಿ. ಕಾಂಪ್ಲೆಕ್ಸ್ ನ್ಯೂ ಸ್ಕೀಮ್ ರೋಡ್ Pollachi, ತಮಿಳುನಾಡು–642002 |

ಅರ್ಜಿದಾರನಾದ ಶ್ರೀ ಕೆ. ನಾಗರಾಜ್ ಇವರು ತಮ್ಮ ಮಗನಾದ ಶ್ರೀ ಧನಶೇಖರ್ (ಚಾಲಕರು) ಇವರು 1ನೇ ಪ್ರತಿವಾದಿಗಳಾದ ಶ್ರೀ ಎನ್.ಎಸ್. ಚಕ್ರವರ್ತಿ, ಬಿನ್.ಎನ್. ಶಾಂತ್ ಕುಮಾರ್ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ : 19–3–2012 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು. ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟನೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
ದ.ಕ. ಉಪ ವಿಭಾಗ–1, ಮಂಗಳೂರು.

**ಪಿ.ಆರ್. 748**

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪ ವಿಭಾಗ–ಮಂಡ್ಯ, ಇವರ ನ್ಯಾಯಾಲಯ.**

**ಸಂಖ್ಯೆ : ಡಬ್ಲ್ಯೂಸಿಎ : ಎಫ್‌ಸಿ/ಸಿಆರ್–3/2012, ದಿನಾಂಕ : 25–5–2012.**

**ಪ್ರಕಟಣೆ**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀ ರಾಮೇಗೌಡ ಬಿನ್ ಈರೇಗೌಡ ವಯಸ್ಸು 36 ವರ್ಷ<br>2. ಶ್ರೀಮತಿ ದೇವಿರಮ್ಮ ಮಗಳು ರಾಮೇಗೌಡ ವಯಸ್ಸು 3 ವರ್ಷ<br>ಕೇಶವನಕಟ್ಟೆ ಗ್ರಾಮ ಬಿಂಡಿಗನ್‌ವಿಲೆ ಹೋಬಳಿ ನಾಗಮಂಗಲ ತಾಲ್ಲೂಕು ಮಂಡ್ಯ ಜಿಲ್ಲೆ | | 1. ಶ್ರೀ ಡಿ.ಕೆ. ದೇವರಾಜಯ್ಯ ಬಿನ್ ಲೇ ಕಾಳಯ್ಯ ಮೇಜರ್ ದಮ್ಮನಿಂಗಲ ಗ್ರಾಮ ಶ್ರವಣಬೆಳಗೊಳ ಹೋಬಳಿ ಚನ್ನರಾಯಪಟ್ಟಣ ತಾಲ್ಲೂಕು ಹಾಸನ ಜಿಲ್ಲೆ<br>2. ಶ್ರೀ ಕೃಷ್ಣೇಗೌಡ ಬಿನ್ ಬೋರೇಗೌಡ ಮೇಜರ್ ತಿರಗನಹಳ್ಳಿ, ಗ್ರಾಮ ಹೊನಕೆರೆ ಹೋಬಳಿ ನಾಗಮಂಗಲ ತಾಲ್ಲೂಕು ಮಂಡ್ಯ ಜಿಲ್ಲೆ.<br>3. ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ಎಂ.ಸಿ. ರೋಡ್, ಮಂಡ್ಯ. |

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ : 25–4–2012 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ 1ನೇ ಅರ್ಜಿದಾರರ ಹೆಂಡತಿ 2ನೇ ಅರ್ಜಿದಾರರ ತಾಯಿಯಾದ ಶ್ರೀಮತಿ ವಸಂತಮ್ಮ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದ ತಾವೇನಾದರೂ ಮೃತರ ನಿಜವಾದ **"ಅವಲಂಬಿತರು"** ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,**
ಮಂಡ್ಯ ಉಪ ವಿಭಾಗ–2. ಮಂಡ್ಯ–571401.

**ಪಿ.ಆರ್. 749**

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪ ವಿಭಾಗ–ಮಂಡ್ಯ, ಇವರ ನ್ಯಾಯಾಲಯ.

**ಸಂಖ್ಯೆ : ಡಬ್ಲ್ಯೂಸಿಎ : ಎಫ್‌ಸಿ/ಸಿಆರ್–4/2012, ದಿನಾಂಕ : 25–5–2012.**

**ಪ್ರಕಟಣೆ**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀ ಕರಣ್ ಸಿಂಗ್ ಬಿನ್ ಕೃಷ್ಣ ಸಿಂಗ್ ವಯಸ್ಸು 36 ವರ್ಷ<br>2. ಬೋನಿಷ ಸಿಂಗ್ ಮಗಳು ಕರಣ್ ಸಿಂಗ್ ವಯಸ್ಸು 1 1/2 ವರ್ಷ<br>ಕೇಶವನಕಟ್ಟೆ ಗ್ರಾಮ ಬಿಂಡಿಗನ್‌ವಿಲೆ ಹೋಬಳಿ ನಾಗಮಂಗಲ ತಾಲ್ಲೂಕು ಮಂಡ್ಯ ಜಿಲ್ಲೆ | | 1. ಶ್ರೀ ಡಿ.ಕೆ. ದೇವರಾಜಯ್ಯ ಬಿನ್ ಲೇ ಕಾಳಯ್ಯ ಮೇಜರ್ ದಮ್ಮನಿಂಗಲ ಗ್ರಾಮ ಶ್ರವಣಬೆಳಗೋಳ ಹೋಬಳಿ ಚನ್ನರಾಯಪಟ್ಟಣ ತಾಲ್ಲೂಕು ಹಾಸನ ಜಿಲ್ಲೆ<br>2. ಶ್ರೀ ಕೃಷ್ಣೇಗೌಡ ಬಿನ್ ಬೋರೇಗೌಡ ಮೇಜರ್ ತಿರಗನಹಳ್ಳಿ, ಗ್ರಾಮ ಹೊನಕೆರೆ ಹೋಬಳಿ ನಾಗಮಂಗಲ ತಾಲ್ಲೂಕು ಮಂಡ್ಯ ಜಿಲ್ಲೆ.<br>3. ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಎಂ.ಸಿ. ರೋಡ್, ಮಂಡ್ಯ. |

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ : 25–4–2012 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ 1ನೇ ಅರ್ಜಿದಾರರ ಹೆಂಡತಿ 2ನೇ ಅರ್ಜಿದಾರರ ತಾಯಿಯಾದ ಶ್ರೀಮತಿ ತೇಜಸ್ವಿನಿ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದ ತಾವೇನಾದರೂ ಮೃತರ ನಿಜವಾದ **"ಅವಲಂಬಿತರು"** ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,**
ಮಂಡ್ಯ ಉಪ ವಿಭಾಗ–2. ಮಂಡ್ಯ–571401.

**ಪಿ.ಆರ್. 750**

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ, ಸಾಗರ ಇವರ ಕಾರ್ಯಾಲಯದಿಂದ

**ಸಂಖ್ಯೆ : ಎಆರ್–25/ಡಿಎಕ್ಸ್‌ಎನ್/ಸ್ಥಿರೀಕರಣ/2012–13, ಬೆಂಗಳೂರು, ದಿನಾಂಕ : 2–5–2012.**

**ವಿಷಯ :** ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಮಲ್ಲಾಪುರ ಸೊರಬ ತಾಲ್ಲೂಕು ಇದರ ಅಧಿಬಾರ ಅರ್ಜಿ ಸಂಖ್ಯೆ : 3/2003–04, ದಿನಾಂಕ : 5–9–2003 ಪಡೆಯಲಾದ ಇ.ಪಿ. ನಂ. 90/2004–05, ಇದರ ಅಮಲ್‌ಜಾರಿ ಸಂಬಂಧ ಸೊರಬ ತಾಲ್ಲೂಕು ಮಲ್ಲಾಪುರ ಗ್ರಾಮದ ಖಾತೆ ಇರುವ ನಂ. 21ಪಿ ಸ್ವತ್ತು ಇದರ ವಿಸ್ತೀರ್ಣ 60X75 ಅಡಿ ಇದರಲ್ಲಿರುವ ಕೆಂಪು ಹೆಂಚಿನ ಮನೆಯನ್ನು ಹರಾಜು ಮಾಡಿ ಸ್ಥಿರೀಕರಣ ಆದೇಶದ ಬಗ್ಗೆ.

**ಉಲ್ಲೇಖ :** ಮಾರಾಟಾಧಿಕಾರಿಗಳ ಪತ್ರ ಸಂಖ್ಯೆ : ಮಾ/ಡಿಎಕ್ಸ್‌ಎನ್/90/2004–05, ದಿನಾಂಕ : 2–5–2012.

**ಪ್ರಸ್ತಾವನೆ :**

ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಸಾಗರ ಇವರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಮಲ್ಲಾಪುರ ಸೊರಬ ತಾಲ್ಲೂಕು ಇದರ ಮಾಜಿ ಕಾರ್ಯದರ್ಶಿಯಾದ ದಿವಂಗತ ಎಸ್. ಬಸವಂತಪ್ಪ ಇವರು ಸಂಘದಲ್ಲಿ ದುರುಪಯೋಗಪಡಿಸಿದ ಬಗ್ಗೆ ಅಧಿಬಾರ ಅರ್ಜಿ ಸಂಖ್ಯೆ : 3/2003–04 ರಲ್ಲಿ ಆದೇಶ ಪಡೆಯಲಾಗಿದ್ದು ಇದರ ಪ್ರಕಾರ ಇ.ಪಿ. ನಂ. 90/2004–05 ರಲ್ಲಿ ಕ್ರಮ ಜರುಗಿಸಿ ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ವಿವಿಧ ದಿನಾಂಕಗಳಂದು ಹರಾಜು ನಡೆಸಿದಾಗ ಹರಾಜಿನಲ್ಲಿ ಯಾವುದೇ ಬಿಡ್ಡುದಾರರು ಭಾಗವಹಿಸದ ಕಾರಣ

ದಿನಾಂಕ : 17–3–2012 ರಂದು ಪುನಃ ಹರಾಜು ನಡೆಸಿದಾಗಲೂ ಯಾವುದೇ ಬಿಡ್ಡುದಾರರು ಭಾಗವಹಿಸದೆ ಇರುವ ಕಾರಣ ಸಂಘಕ್ಕೆ ಬರಬೇಕಾದ 7.50 ಲಕ್ಷ ರೂ.ಗಳಿಗೆ ಸದರಿಯವರಿಂದ ಜಮಾ ಬರಬೇಕಾಗಿದ್ದು ಬಿಡ್ಡನ್ನು 5.50 ಲಕ್ಷಕ್ಕೆ ಸಂಘದ ಹೆಸರಿಗೆ ನಿಲ್ಲಿಸಲಾಗಿತ್ತು. ಈ ಬಗ್ಗೆ ಸದರಿಯವರ ಕಾನೂನುಬದ್ದ ವಾರಸುದಾರರಾದ ಶ್ರೀಮತಿ ಸುಮಿತ್ರಮ್ಮ ಪಾಳ ಮುಂಡಗೋಡು ತಾಲ್ಲೂಕು ಉತ್ತರ ಕನ್ನಡ ಜಿಲ್ಲೆ ಇವರಿಗೆ ಪತ್ರ ಬರೆಯಲಾಗಿದ್ದು ತಮ್ಮ ಆಕ್ಷೇಪಣೆ ಏನೂ ಇಲ್ಲವೆಂದು ಲಿಖಿತವಾಗಿ ತಿಳಿಸಿರುತ್ತಾರೆ. ಅಲ್ಲದೆ ಶ್ರೀ ಶಿವನಗೌಡ ಇವರು ತಮ್ಮ ತಕರಾರು ಇರುವುದಾಗಿ ತಿಳಿಸಿದ್ದು ದಿನಾಂಕ : 5–4–2012 ರ ಅವರ ಪತ್ರದಲ್ಲಿ ನನ್ನ ಯಾವುದೇ ತಕರಾರು ಇಲ್ಲವೆಂದು ತಿಳಿಸಿರುತ್ತಾರೆ. ಆದರೆ ಈ ಸ್ಥಿರಾಸ್ತಿಗೆ ಸಂಬಂಧಿಸಿದರು ಇದುವರೆಗೂ ಯಾವುದೇ ಆಕ್ಷೇಪಣೆ ಮಾಡದೆ ಹಾಗೂ ಪತ್ರದ ಮುಖಾಂತರ ತಿಳಿಸದೇ ಇರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಮತ್ತು ನಿಯಮ 1960ರ ನಿಯಮ 38(6)ರ ಅಡಿಯಲ್ಲಿ ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಸಾಗರ ಇವರು ದಿನಾಂಕ : 17–3–2012 ರಂದು ಹರಾಜು ಮಾಡಿ ಹರಾಜಿನಲ್ಲಿ ಯಾವುದೇ ಬಿಡ್ಡುದಾರರು ಭಾಗವಹಿಸದೆ ಇರುವ ಕಾರಣ ರೂ. 5.50 ಲಕ್ಷ ರೂ.ಗಳಿಗೆ ಸಂಘಕ್ಕೆ ಬಿಡ್ಡನ್ನು ನಿಲ್ಲಿಸಿ ಸ್ಥಿರಾಸ್ತಿಯನ್ನು ಖಾಯಂಗೊಳಿಸುವ ಬಗ್ಗೆ ಉಲ್ಲೇಖದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದು ಅದರಂತೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿರುರ ಸೊರಬ ತಾಲ್ಲೂಕು ಆನವಟ್ಟಿ ಹೋಬಳಿ ಕುಬಟೂರು ಗ್ರಾಮಪಂಚಾಯಿತಿಗೆ ಒಳಪಟ್ಟ ಮಲ್ಲಾಪುರ ಗ್ರಾಮದ ಖಾತೆ ನಂ. 21ಪಿ ರ ಸ್ವತ್ತು ಇದರ ವಿಸ್ತೀರ್ಣ ಪೂರ್ವ ಪಶ್ಚಿಮ 60 ಅಡಿಗಳು ಉತ್ತರ ದಕ್ಷಿಣ 75 ಅಡಿಗಳು ಇದರಲ್ಲಿ ಹಳೇದಾದ ಕೆಂಪು ಹೆಂಚಿನ ಕಟ್ಟಡ ಸೇರಿದಂತೆ ಮಾರಾಟ ಮಾಡಿರುವುದನ್ನು ಸ್ಥಿರೀಕರಿಸಿ ಈ ಮೂಲಕ ಸೇಲ್ ಸರ್ಟಿಫಿಕೇಟ್ ಅನ್ನು ಜಾರಿ ಮಾಡುವ ಸಂಬಂಧವಾಗಿ ಖರೀದಿದಾರರು ಹರಾಜಿನ ಮೊತ್ತಕ್ಕೆ ಸ್ಟಾಂಪ್ ಪೇಪರ್ ತಲುಪಿಸಿ, ಈ ಆದೇಶ ತಲುಪಿದ 15 ದಿನಗಳೊಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಸಮ್ಮುಖದಲ್ಲಿ ಹಾಜರುಪಡಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ : 2–5–2012 ರಂದು ನನ್ನ ಸ್ವಹಸ್ತ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಜಾರಿ ಮಾಡಿರುತ್ತೇನೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು,**
ಸಾಗರ ಉಪವಿಭಾಗ, ಸಾಗರ

**ಪಿ.ಆರ್. 752**

## ಸಹಕಾರ ಸಂಘಗಳ ಉಪ ನಿಬಂಧಕರು, ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ, ನಂ. 146, 3ನೇ ಮುಖ್ಯ ರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರ, ಬೆಂಗಳೂರು ರವರ ಕಾರ್ಯಾಲಯ

**ಸಂಖ್ಯೆ : ಡಿಆರ್‌ಬಿ–ಸಿ/ಸಮಾಪನೆ/7/2012–13, ಬೆಂಗಳೂರು, ದಿನಾಂಕ : 18–5–2012.**

**ವಿಷಯ :** ಕಾರ್ಯ ನಿರ್ವಹಿಸದ ಸಹಕಾರ ಸಂಘಗಳನ್ನು ಸಮಾಪನೆಗೊಳಿಸುವ ಬಗ್ಗೆ

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ : ಸಇ : 302 : ಎಸಸೇ : 2010, ಬೆಂಗಳೂರು, ದಿನಾಂಕ : 30–3–2011.
2. ಸಹಕಾರ ಸಂಘಗಳ ಉಪ ನಿಬಂಧಕರು, ಉತ್ತರ ವಲಯ ಬೆಂಗಳೂರುರವರ ಪತ್ರ ಸಂಖ್ಯೆ: ಡಿಆರ್‌ಬಿ–ಎನ್ : ಎಲ್‌ಕ್ಯೂಡಿ : 18 : 2011–2012, ದಿನಾಂಕ : 24–2–2011.

**ಪ್ರಸ್ತಾವನೆ :**

ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1) ರ ಸರ್ಕಾರದ ಅಧಿಸೂಚನೆಯಂತೆ ಈ ಕೆಳಕಂಡ ಸಹಕಾರ ಸಂಘಗಳು ಈ ಕಛೇರಿ ವ್ಯಾಪ್ತಿಗೆ ಬರುವುದರಿಂದ ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಉತ್ತರ ವಲಯ ಬೆಂಗಳೂರುರವರು ಸದರಿ ಸಮಾಪನೆಗೊಂಡಿರುವ ಸಹಕಾರ ಸಂಘಗಳ ಕಡತಗಳನ್ನು ಈ ಕಛೇರಿಗೆ ವರ್ಗಾಯಿಸಿರುತ್ತಾರೆ. ಈ ಅಂಶಗಳ ಹಿನ್ನಲೆಯಲ್ಲಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರಡಿಯಲ್ಲಿ ಹಾಗೂ ಸರ್ಕಾರದ ಆದೇಶ ಸಂಖ್ಯೆ : ಸಇ :302 :ಎಸಸೇ: 2010, ಬೆಂಗಳೂರು ದಿನಾಂಕ : 30–3–2011 ರ ಪ್ರಕಾರ ದತ್ತವಾಗಿರುವ ಅಧಿಕಾರದನ್ವಯ ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪ ನಿಬಂಧಕರು, ಕೇಂದ್ರ ವಲಯ, ಬೆಂಗಳೂರು ಆದ ನಾನು ಕಾರ್ಯ ನಿರ್ವಹಿಸದೆ ಸ್ಥಗಿತಗೊಂಡಿರುವ ಈ ಕೆಳಕಂಡ ಅನುಬಂಧದಲ್ಲಿ ನಮೂದಿಸಿರುವ ಸಹಕಾರ ಸಂಘಗಳಿಗೆ ಆಯಾ ಸಹಕಾರ ಸಂಘಗಳ ಹೆಸರಿನ ಮುಂದೆ ನಮೂದಿಸಿರುವವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಿರುತ್ತೇನೆ.

**ಅನುಬಂಧ**

| ಕ್ರ. ಸಂ. | ಸಂಘದ ಹೆಸರು | ಸಮಾಪನಾಧಿಕಾರಿ ಹೆಸರು |
|---|---|---|
| 1. | ವಿಜಯನಗರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ನಂ. 32, 2ನೇ ಮುಖ್ಯ ರಸ್ತೆ, ಬಸವೇಶ್ವರನಗರ ಲೇಔಟ್, ವಿಜಯನಗರ, ಬೆಂಗಳೂರು–40. | ಎಸ್.ಎಸ್. ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತರವರ ಕಛೇರಿ, ಬೆಂಗಳೂರು |
| 2. | ರಾಧಾಕೃಷ್ಣ ಪತ್ತಿನ ಸಹಕಾರ ಸಂಘ ನಿ, ನಂ. 41, 1ನೇ ಮಹಡಿ, 10ನೇ ಅಡ್ಡರಸ್ತೆ, ಮಾಗಡಿ ರಸ್ತೆ, ಬೆಂಗಳೂರು–23 | |

ಸಮಾಪನಾಧಿಕಾರಿಗಳು ಸದರಿ ಸಹಕಾರ ಸಂಘಗಳ ಪ್ರಭಾರವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವಾರದೊಳಗಾಗಿ ವಹಿಸಿಕೊಂಡು ಈ ಕಛೇರಿಗೆ ವರದಿಯನ್ನು ಸಲ್ಲಿಸತಕ್ಕದ್ದು. ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮ 33 ರಂತೆ ಸಮಾಪನಾಧಿಕಾರಿಯ ಕರ್ತವ್ಯವನ್ನು ನಿರ್ವಹಿಸತಕ್ಕದ್ದು ಹಾಗೂ ನಿಯಮಗಳ ಪ್ರಕಾರ ಆಸ್ತಿ ಜವಾಬ್ದಾರಿಗಳನ್ನು ವಿಲೇ ಮಾಡಿ ಕ್ರಮ ಕೈಗೊಂಡು ಸಂಘವನ್ನು ಪುನಃಶ್ಚೇತನಗೊಳಿಸಲು ಅಥವಾ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ : 18–5–2012 ರಂದು ಹೊರಡಿಸಲಾಗಿದೆ.

**ಎಂ.ಡಿ. ನರಸಿಂಹಮೂರ್ತಿ,**
ಸಹಕಾರ ಸಂಘಗಳ ಉಪನಿಬಂಧಕರು,
ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ.

**ಪಿ.ಆರ್. 753**

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

### ಪ್ರಕಟಣೆ

**ಸಂಖ್ಯೆ: ಕಾನಿಇಂ/ಬೆಬೃಕಾವಿ/ಶಿ/109–18, ದಿನಾಂಕ: 18–5–2012.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು 2003 ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮದ ಪ್ರಕರಣ 67 ಅನ್ವಯ ಈ ಕೆಳಗೆ ತಿಳಿಸಿರುವ ಯೋಜನೆಗಳನ್ನು ರೂಪಿಸಿದೆ. ಹಾಗೂ ಸದರಿ ಯೋಜನೆಗಳನ್ನು ಲೈಸೆನ್ಸ್ ದಾರರು ಮತ್ತು ಆಸಕ್ತರು ಯಾವುದೇ ಇತರ ವ್ಯಕ್ತಿಗಳ ತಿಳುವಳಿಕೆಗಾಗಿ ಈ ಮೂಲಕ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

**ಯೋಜನೆಯ ವಿವರ :**

1. 66/11 ಕೆವಿ ವಿದ್ಯುತ್ ವಿತರಣಾ ಕೇಂದ್ರವನ್ನು ದುಗ್ಗಾಲಪುರ ಗ್ರಾಮ ತರೀಕೆರೆ ತಾಲ್ಲೂಕ್, ಚಿಕ್ಕಮಗಳೂರು ಜಿಲ್ಲೆಯಲ್ಲಿ ನಿರ್ಮಿಸುವುದು ಹಾಗೂ ಈ ಕೇಂದ್ರಕ್ಕೆ ಸಂಬಂಧಪಟ್ಟ 0.295 ಕಿ.ಮೀ ಉದ್ದದ 66 ಕೆವಿ ಲಿಲೋ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.
2. ಪ್ರಸ್ತಾಪಿಸಿರುವ 66/11 ಕೆವಿ ವಿದ್ಯುತ್ ವಿತರಣಾ ಕೇಂದ್ರ ದುಗ್ಗಾಲಪುರಗೆ 0.295 ಕಿ.ಮೀ ಉದ್ದದ 66 ಕೆವಿ ದ್ವಿ ಪ್ರಸರಣ ಮಾರ್ಗವನ್ನು ಜೋಡಿ ಗೋಪುರಗಳ ಮೇಲೆ 66 ಕೆವಿ ಭದ್ರಾ– ಚಿಕ್ಕಮಗಳೂರು ಜೋಡಿ ಪ್ರಸರಣ ಮಾರ್ಗದಿಂದ ನಿರ್ಮಿಸುವುದು ಹಾಗೂ ಈ ಪ್ರಸರಣ ಮಾರ್ಗವು ದುಗ್ಗಾಲಪುರ ಗ್ರಾಮದ ಸರಹದ್ದಿನ ಮುಖಾಂತರ ಹಾದು ಹೋಗುತ್ತದೆ.
3. ಯೋಜನೆಯ ಉದ್ದೇಶ: ಈ ಯೋಜನೆಯಿಂದ ದುಗ್ಗಾಲಪುರ ಹಾಗೂ ಸುತ್ತಮುತ್ತಲಿನ ಸುಮಾರು 20 ಹಳ್ಳಿಗಳ ಸರಹದ್ದಿನಲ್ಲಿ ಬರುವ ನೀರಾವರಿ ಪಂಪುಸೆಟ್ಟುಗಳಿಗೆ ಮತ್ತು ಇತರ ಗ್ರಾಹಕರಿಗೆ ಉತ್ತಮ ಗುಣಮಟ್ಟದ ಮತ್ತು ನಿರಂತರ ವಿದ್ಯುತ್ ಸರಬರಾಜು ಮಾಡಲು ಅನುಕೂಲವಾಗುತ್ತದೆ.

ಈ ಮೇಲ್ಕಂಡ ಯೋಜನೆಗಳ ಒಟ್ಟು ಅಂದಾಜು ವೆಚ್ಚ ರೂ. 441.69 ಲಕ್ಷಗಳಾಗಿರುತ್ತವೆ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಭಾಗ–3 (ಕೇಂದ್ರಿಯ ಕಾಯ್ದೆ 1885ರ 13ರನ್ವಯ) ಅಧಿನಿಯಮ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲ ಅಧಿಕಾರಗಳನ್ನು ಹೊಂದಿರುತ್ತದೆ ಮತ್ತು ಚಲಾಯಿಸುತ್ತದೆ. ಸದರಿ ಯೋಜನೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 30 ದಿನಗಳೊಳಗಾಗಿ ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಚಿಕ್ಕ ಮಗಳೂರು ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಶಿವಮೊಗ್ಗ ಇವರ ಕಚೇರಿಗೆ ಲಿಖಿತ ರೂಪದಲ್ಲಿ ಸಲ್ಲಿಸಬೇಕಾಗಿ ವಿನಂತಿ ಹಾಗೂ ತದನಂತರ ಬರುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲವೆಂದು ಈ ಮೂಲಕ ತಿಳಿಯಪಡಿಸುತ್ತಿದ್ದೇವೆ.

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ),**
ಚಿಕ್ಕಮಗಳೂರು ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ,
ಶಿವಮೊಗ್ಗ.

**ಪಿ.ಡಿ. 62**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು, ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರ, ಬೆಂಗಳೂರುರವರ ಕಾರ್ಯಾಲಯ.**

**ವಿಷಯ:** ಸಮಾಪನೆ ಸಹಕಾರ ಸಂಘಗಳ ನೋಂದಣಿಯನ್ನು ರದ್ಧತಿ ಮಾಡುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ : ಎಆರ್‌ಬಿ–45(ಸಿ)ಸಮಾಪನೆ/95/2011–12/ದಿನಾಂಕ: 26–03–2012.

ವಿಷಯಕ್ಕೆ ಸಂಬಂಧಿಸಿದಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತ, ಇವರು ಉಲ್ಲೇಖಿತ ಪತ್ರದಲ್ಲಿ ಈ ಕೆಳಕಂಡ ಸಹಕಾರ ಸಂಘಗಳ ನೋಂದಣಿ ರದ್ಧತಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 7 ರಡಿಯಲ್ಲಿ ನೋಂದಣಿಗೊಳಿಸಲಾದ ಈ ಸಂಘಗಳ ನೋಂದಣಿಯಾದ ವಿಳಾಸದಲ್ಲಿ ಕಾರ್ಯ ನಿರ್ವಹಿಸದೆ ಸ್ಥಗಿತಗೊಂಡಿದ್ದು, ಹಾಗೂ ಸದರಿ ಸಹಕಾರ ಸಂಘಗಳಿಗೆ ಸಂಬಂಧಿಸಿದ ಯಾವುದೇ ದಾಖಲೆಗಳು ಹಾಗೂ ಲೆಕ್ಕಪತ್ರಗಳು ಲಭ್ಯವಿರುವುದಿಲ್ಲವೆಂದು, ಸದರಿ ಸಹಕಾರ ಸಂಘಗಳ ಆಸ್ತಿ ಜವಾಬ್ದಾರಿಗಳು ಶೂನ್ಯವೆಂದು ಪರಿಗಣಿಸಿ ಹಾಗೂ ಸದರಿ ಸಂಘಗಳನ್ನು ಪುನಃಶ್ಚೇತನಗೊಳಿಸಲು ಯಾರೂ ಮುಂದೆ ಬಂದಿರುವುದಿಲ್ಲ. ಹಾಗೂ ಈ ಸ್ಥಿತಿಯಲ್ಲಿರುವ ಸಂಘಗಳಿಂದ ಯಾವುದೇ ಪ್ರಯೋಜನೆಗಳು ಇಲ್ಲದಿರುವುದನ್ನು ಮನಗಂಡು ಈ ಸ್ಥಿತಿಯಲ್ಲಿ ಮುಂದುವರೆಸುವುದರಲ್ಲಿ ಯಾವುದೇ ಉಪಯೋಗವಿಲ್ಲದ ಕಾರಣ, ಸಂಬಂಧಿಸಿದ ಸಂಘಗಳ ನೋಂದಣಿಯನ್ನು ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರಡಿಯಲ್ಲಿ ರದ್ದುಗೊಳಿಸಲು ತೀರ್ಮಾನಿಸಿ, ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಮಾಪನೆಯಲ್ಲಿರುವ ಸಹಕಾರ ಸಂಘಗಳು ಸರ್ಕಾರಕ್ಕೆ ಷೇರು ಸಾಲ ಅಥವಾ ಇತರೇ ಯಾವುದೇ ಬಾಕಿ ಇರುವುದಿಲ್ಲವೆಂದು ಸಂಘದ ಇತರೆ ಆಸ್ತಿ-ಜವಾಬ್ದಾರಿಗಳಿಗೆ ರಹವಿಲ್ಲವೆಂಬ ಅಂಶವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಳಿಸಿರುತ್ತಾರೆ. ಸದರಿ ಸಂಘಗಳ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಸಂ:ಡಿಆರ್‌ಬಿ-ಸಿ/ನೋ ರದ್ಧತಿ/51/2011-2012, ದಿನಾಂಕ: 30-03-2012.**

ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರಡಿಯಲ್ಲಿ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಇ:302:ಎಸಸೇ:2010 ದಿನಾಂಕ: 30-03-2011 ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಡಿ.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪ ನಿಬಂಧಕರು, ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಈ ಕೆಳಕಂಡ ಸಂಘಗಳ ನೋಂದಣಿ ಸಂಖ್ಯೆಯನ್ನು ಮೇಲೆ ತಿಳಿಸಿದ ಕಾರಣಗಳಿಗಾಗಿ ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

| ಕ್ರಮ ಸಂಖ್ಯೆ | ಸಮಾಪನಾ ಸಹಕಾರ ಸಂಘದ ಹೆಸರು |
|---|---|
| 1 | ಬಿ.ಎಂ.ಎಸ್. ಕಾಲೇಜು ಎಂಪ್ಲಾಯೀಸ್ ಸಹಕಾರ ಸಂಘ ನಿಯಮಿತ, ಬೆಂಗಳೂರು |
| 2 | ಬೆಂಗಳೂರು ಸಿಟಿ ಅರ್ಬನ್ ಸಹಕಾರ ಸಂ.ನಿ, ಗಾಂಧಿನಗರ, ಬೆಂಗಳೂರು |
| 3 | ರಂಗನಾಥಸ್ವಾಮಿ ರೇಷ್ಮೆ ಕೈಮಗ್ಗ ನೇಕಾರರ ಉತ್ಪತ್ತಿ ಮಾರಾಟ ಸಂಘ ನಿ. ಬೆಂಗಳೂರು. |
| 4 | ಶ್ರೀ ಚೇತನ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ನಂ.204, 8ನೇ ಮೈನ್, 2ನೇ ಬ್ಲಾಕ್, ಜಯನಗರ, ಬೆಂಗಳೂರು. |
| 5 | ಉಕ್ಕಡದಪಾಳ್ಯ ಬಳಕೆದಾರರ ಸಹಕಾರ ಸಂಘ ನಿ, ಹೊನ್ನಾರಪೇಟೆ, ವಿವೇಕನಗರ, ಬೆಂಗಳೂರು. |
| 6 | ಮಾಧವನಗರ ಬಳಕೆದಾರರ ಸಹಕಾರ ಸಂಘ ನಿ, ಮಾಧವನಗರ, ಬೆಂಗಳೂರು |
| 7 | ಪ್ರೊಡೆನ್ಷಿಯಲ್ ಬಳಕೆದಾರರ ಸ.ಸಂ.ನಿ, ನಂ.45, ರಿಚ್‌ಮಂಡ್ ರಸ್ತೆ, ಬೆಂಗಳೂರು-25 |
| 8 | ಫ್ರೇಜರ್ ಟೌನ್ ಬಳಕೆದಾರರ ಸಹಕಾರ ಸಂಘ ನಿ, ಬೆಂಗಳೂರು |
| 9 | ವಿ.ವೈ.ಎಸ್.ಆಫೀಸರ್ಸ್ ಕ್ರೆಡಿಟ್ ಕೋ.ಆಪರೇಟೀವ್ ಸೊಸೈಟಿ ಲಿ. ನಂ. 86/1, 1ನೇ ಮಹಡಿ, ಡಿ.ವಿ.ಜಿ.ರಸ್ತೆ, ಬೆಂಗಳೂರು |
| 10 | ಎನ್.ಟಿ.ಸಿ. ನೌಕರರ ಪತ್ತಿನ ಸಹಕಾರ ಸಂಘ ನಿ, ಕೆ.ಹೆಚ್. ರಸ್ತೆ, ಬೆಂಗಳೂರು. |
| 11 | ಕಮರ್ಷಿಯಲ್ ಎಂಪ್ಲಾಯೀಸ್ ಪತ್ತಿನ ಸ.ಸಂ.ನಿ. ಓಟಿಎಸ್ ರಸ್ತೆ, ಬೆಂಗಳೂರು |
| 12 | ಹಿಂದುಸ್ಥಾನ್ ಮಿಲ್ಕ್ ಫುಡ್ ಮ್ಯಾನುಫ್ಯಾಕ್ಚರಿಂಗ್ ನೌಕರರ ಬಳಕೆದಾರರ ಸ.ಸಂ.ನಿ, ನಂ.2, 5ನೇ ಮುಖ್ಯರಸ್ತೆ, ವಿಲ್ಸನ್ ಗಾರ್ಡನ್, ಬೆಂಗಳೂರು. |
| 13 | ಫುಡ್ ಕಾರ್ಪೋರೇಷನ್ ಆಫ್ ಇಂಡಿಯಾ (ಕರ್ನಾಟಕ) ನೌಕರರ ಕ್ರೆಡಿಟ್ & ತ್ರಿಫ್ಟ್ ಸಸಂನಿ, ನಂ3, ಪಲ್ಲವಿ ಕಾಂಪ್ಲೆಕ್ಸ್, ಮಿಷನ್ ರಸ್ತೆ, ಬೆಂಗಳೂರು. |
| 14 | ಅಲ್ ಫಯಾಜ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ, ಬೆಂಗಳೂರು |

ಈ ಆದೇಶವನ್ನು ನನ್ನ ಸ್ವಹಸ್ತ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 30-03-2012 ರಂದು ಹೊರಡಿಸಿರುತ್ತೇನೆ.

**ಎಂ.ಡಿ.ನರಸಿಂಹಮೂರ್ತಿ,**
ಸಹಕಾರ ಸಂಘಗಳ ಉಪ-ನಿಬಂಧಕರು,
ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

**ಪಿ.ಆರ್. 754**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಮಮಇ 178 ಎಸ್‌ಜೆಡಿ 2012, ದಿನಾಂಕ: 17–5–2012.**

ಸರ್ಕಾರಿ ಅಧಿಸೂಚನೆ ಸಂಖ್ಯೆ : ಮಮಇ/264/ಎಸ್‌ಜೆಡಿ/2011 ದಿನಾಂಕ 21–10–2011 ರ ಆದೇಶ ಭಾಗದ ಕಂಡಿಕೆ –1 ರ ಉಪ ಕಂಡಿಕೆ (2)ರ ನಂತರ ಉಪ ಕಂಡಿಕೆ (2) (ಎ) ರಲ್ಲಿ ಈ ಕೆಳಕಂಡ ವ್ಯಾಕಗಳನ್ನು ಸೇರಿಸಿ ತಿದ್ದಿ ಓದಿಕೊಳ್ಳತಕ್ಕದ್ದು.

"ಸರ್ಕಾರಿ ಅಧಿಸೂಚನೆ ಸಂಖ್ಯೆ : ಮಮಇ 192 ಎಸ್‌ಜೆಡಿ 99 ದಿನಾಂಕ: 05–02–2003ರಲ್ಲಿನ ಈ ಕೆಳಕಂಡ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ಅಧೀಕ್ಷಕರುಗಳ ಹೆಸರು ಮತ್ತು ಅವರ ಹೆಸರಿನ ಮುಂದೆ ನಮೂದಿಸಿರುವ ಪದೋನ್ನತಿ ದಿನಾಂಕವನ್ನು ಹಿಂತೆಗೆದುಕೊಳ್ಳಲಾಗಿದೆ.

| ಕ್ರ.ಸಂ. | ಜೇಷ್ಠತಾ ಪಟ್ಟಿ ಕ್ರಮ ಸಂಖ್ಯೆ | ನೌಕರರ ಹೆಸರು (ಶ್ರೀಯುತರು) | ಪದೋನ್ನತಿ ದಿನಾಂಕ |
|---|---|---|---|
| 1 | 16 | ಎಸ್.ವಿ.ಜಾನಾಬಾಯಿ | 10–8–99 |
| 3 | 26 | ಹೆಚ್.ಎಸ್.ಬಲರಾಮ | 10–8–99 |
| 4 | 28 | ಬೆಳ್ಳಿಯಪ್ಪಗೌಡ | 10–8–99 |
| 7 | 40 | ಕೆ.ಮುನಿರಾಜು | 10–8–99 |
| 8 | 15 | ಬಿ.ಎಂ.ಹೊಸಪೇಟೆ | 31–5–01 |

(2) (ಬಿ) "ಸರ್ಕಾರಿ ಅಧಿಸೂಚನೆ ಸಂಖ್ಯೆ : ಮಮಇ 364 ಎಸ್‌ಜೆಡಿ 2004 ದಿನಾಂಕ: 16–02–2010 ರಲ್ಲಿನ ಈ ಕೆಳಕಂಡ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ಅಧೀಕ್ಷಕರುಗಳ ಹೆಸರು ಮತ್ತು ಅವರ ಹೆಸರಿನ ಮುಂದೆ ಪೂರ್ವಾನ್ವಯ ಬಡ್ತಿಗೆ ಅರ್ಹತೆ ದಿನಾಂಕ ನಮೂದಿಸಿರುವುದನ್ನು ಹಿಂತೆಗೆದುಕೊಳ್ಳಲಾಗಿದೆ "

| ಕ್ರ.ಸಂ | ಅಧಿಕಾರಿಯ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ಪೂರ್ವಾನ್ವಯ ಬಡ್ತಿಗೆ ಅರ್ಹತೆ ದಿನಾಂಕ |
|---|---|---|
| 1 | ಮೂಕಾಂಬಿಕ,<br>ಅಧೀಕ್ಷಕರು, ಬಾಲಕಿಯರ ಬಾಲಮಂದಿರ, ಉಡುಪಿ | 04–02–2004 |
| 2 | ಎ.ಬಿ.ಮುನಿಯಪ್ಪನವರ್,<br>ಅಧೀಕ್ಷಕರು, ಬಾಲಕರ ಬಾಲಮಂದಿರ, ಹುಬ್ಬಳ್ಳಿ. | 04–02–2004 |
| 3 | ಎನ್.ಎ.ಪುಟ್ಟಪ್ಪನವರ್,<br>ಅಧೀಕ್ಷಕರು, ಮನೋವಿಕಲ ಬಾಲಕಿಯರ ಬಾಲಮಂದಿರ, ಹುಬ್ಬಳ್ಳಿ. | 04–02–2004 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕಮಲಮ್ಮ ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 764**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು –560018.**

**ವಿಷಯ:** ಸಮಾಪನೆಯಲ್ಲಿರುವ ಭದ್ರಾವತಿ ತಾಲ್ಲೂಕು ಹರಿಜನ–ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘ ನಿ., ಭದ್ರಾವತಿ ಇದರ ನೋಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಂ:ಜೆಆರ್‌ಬಿ/ಸಮಾಪನೆ/16/1997–98 ದಿನಾಂಕ: 30–06–2004.
2. ಈ ಕಛೇರಿಯ ಆದೇಶ ಸಂ:ಜೆಆರ್‌ಬಿ/ಸಮಾಪನೆ/16/ಎಲ್‌ಎಂಸಿ/1997–98 ದಿನಾಂಕ: 21–02–1997.
3. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಪತ್ರ ನಂ: ಡಿಆರ್‌ಎಸ್/ಎಲ್‌ಕ್ಯೂಡಿ/73/ 1996–97 /ದಿನಾಂಕ: 06–11–2004.
4. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಪತ್ರ ನಂ: ಡಿಆರ್‌ಎಸ್/ಸಮಾಪನೆ/ಸಿಆರ್–73 / 1996–97 /ದಿನಾಂಕ: 27–03–2012.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ಭದ್ರಾವತಿ ತಾಲ್ಲೂಕು ಹರಿಜನ-ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘ ನಿ., ಭದ್ರಾವತಿ ಈ ಸಹಕಾರ ಸಂಘವು ತಾಲ್ಲೂಕು ಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿ ಆದೇಶ ಸಂ:823/1961-62 ದಿನಾಂಕ 08-03-1962 ರಂದು ನೋಂದಣೆಯಾಗಿರುತ್ತದೆ. ಉಪನಿಯಮಗಳ ಉದ್ದೇಶಗಳಂತೆ ಕಾರ್ಯನಿರ್ವಹಿಸದೆ ಯಾವುದೇ ಕಾರ್ಯ ನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು ಸಹಕಾರ ಅಭಿವೃದ್ಧಿ ಅಧಿಕಾರಿ, ಕಚೇರಿ ಭದ್ರಾವತಿ ಇವರನ್ನು ನೇಮಕ ಮಾಡಲಾಗಿತ್ತು. ತದನಂತರ ಉಲ್ಲೇಖ(2)ರ ಆದೇಶದಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ ಭದ್ರಾವತಿ ಇವರನ್ನು ಮರುನೇಮಕ ಮಾಡಲಾಯಿತು. ಸಮಾಪನಾಧಿಕಾರಿ ದಿನಾಂಕ: 15-03-2004 ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕೈಗೊಂಡಿರುತ್ತಾರೆ. ದಿನಾಂಕ: 15-03-2012 ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಸಂಘದ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ವಿಲೇವಾರಿ ಮಾಡಿ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ ಮತ್ತು ಸಂಘದ ನೋಂದಣಿ ಕ್ರಮಾಂಕವನ್ನು ರದುಪಡಿಸಲು ತೀರ್ಮಾನಿಸಿರುತ್ತಾರೆ. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರು ಪ್ರಸ್ತಾವನೆಯನ್ನು ಪರಿಶೀಲಿಸಿ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ : 31-03-2011 ಕ್ಕೆ ಇದ್ದಂತೆ ಸಂಘದಲ್ಲಿ ಸರ್ಕಾರದ ಬಡ್ಡಿರಹಿತ ಸಾಲ ರೂ.1325-00 ಸರ್ಕಾರದ ಸಾಲದ ದಂಡದ ಬಡ್ಡಿ ರೂ.2094-00 ಗಳ ಜವಾಬ್ದಾರಿ ಮಾತ್ರ ಇದ್ದು, ಯಾವುದೇ ಆಸ್ತಿಮೂಲಗಳು ಇರುವುದಿಲ್ಲಾ. ಸರ್ಕಾರಕ್ಕೆ ಈ ಮೊತ್ತ ಪಾವತಿಸಲು ಸಹಕಾರ ಸಂಘಗಳಿಂದ ದೇಣಿಗೆ ಪಡೆದು ದಿನಾಂಕ: 09-03-2012 ರಂದು ಚಲನ್ ನಂ:-03 ಮತ್ತು -04 ರಲ್ಲಿ ಸರ್ಕಾರಕ್ಕೆ ಪಾವತಿಸಿರುತ್ತಾರೆ. ಆಸ್ತಿ-ಜವಾಬ್ದಾರಿ ವಿಲೇವಾರಿ ಮಾಡಿರುತ್ತಾರೆ. ಮತ್ತು ದಿನಾಂಕ: 15-03-2012ಕ್ಕೆ ಇದ್ದಂತೆ ಆಸ್ತಿ-ಜವಾಬ್ದಾರಿಯನ್ನು ಸಮಾಪನಾಧಿಕಾರಿ ಶೂನ್ಯಗೊಳಿಸಿರುತ್ತಾರೆ. ದಿನಾಂಕ: 22-12-2011 ರ ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಮತ್ತು ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಶಿಫಾರಸ್ಸನ್ನು ಅಂಗೀಕರಿಸಿ ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂ:- ಜೆಆರ್‌ಬಿ/ಸಮಾಪನೆ/16/1997-98, ದಿನಾಂಕ: 31-03-2012.**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139 ಸಿಎಲ್‌ಎಂ 2011 ದಿನಾಂಕ: 17-02-2011 ರನ್ವಯ ದತ್ತವಾಗಿರುವ ಅಧಿಕಾರದನ್ವಯ ಸಿ.ಎಸ್.ವಿರೇಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಸಮಾಪನಾದೇಶಿತ ಭದ್ರಾವತಿ ತಾಲ್ಲೂಕು ಹರಿಜನ-ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘ ನಿ., ಭದ್ರಾವತಿ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ : 823/1961-62 ದಿನಾಂಕ: 08-03-1962 ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 31-03-2012 ರಂದು ನೀಡಲಾಗಿದೆ.

**ಸಿ.ಎಸ್. ವೀರೇಶ್,**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಪಿ.ಆರ್. 768**

## PROCEEDINGS OF THE DISTRICT AND SESSIONS COURT, HAVERI, AT HAVERI

**Subject:** Handing over charge of compilation of Chief Administrative Officer post held by Sri. Srimanth Kanni, who is retiring on 31-05-2012 after superannuation.

**Read:** 1. Hon`ble High Court Notification No.LCA-II. 11 (Rtmt)/2011 Dtd: 25-05-2012.
2. Office Note Dtd: 31st May 2012 and orders passed thereon.

**Preamble:**

The Hon`ble High Court under Notification No. LCA-II (Rtmt)/2011 Dtd: 25-05-2012 has permitted Sri. Srimanth Kanni, Chief Administrative Officer District and Sessions Court, Haveri to retire from service w.e.f., 31-05-2012 on attaining the age of

superannuation as per Rule 95 (1) of K.C.S. Rules. Hence the incharge arrangement of Chief Administrative Officer`s post has to be made, Hence the following:

**OFFICE ORDER No.66/2012, DATED: 31ST MAY 2012.**

Sri B. Serenivas, Administrative Sheristedar, District and Sessions Court Haveri, is placed incharge of the post of Chief Administrative Officer w.e.f, 01-06-2012 until further orders. He shall receive the entire charge of the complilation held by Sri. Srimanth Kanni, Chief Administrative Officer, who is retiring on 31-05-2012 A.N., on superannuation.

**H.P. SANDESH**
District and Sessions Judge,
Haveri.

**P.R. 769**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES (KARNATAKA) BANGALORE-CLARIFICATION UNDER SECTION 59 (4) OF THE KARNATAKA VALUE ADDED TAX ACT-2003.

**Sub:** KVAT Act, 2003-Clarification under Section 59(4) on `Plastic scrap'-reg.

**Ref:** Application dated. 21-03-2012 of M/s Ayub Enterprises, Bangalore. TIN No. 29100450328.

In the application cited above M/s Ayub Enterprises,, No. 24/A, 1st Main, 4th Cross, Popular colony, Near Almas Plaza, Bommanahalli, Bangalore-560 068 has sought clarification regarding the rate of tax applicable on `Waste Plastic Scrap'.

2. Section 59(4) of the Karnataka Value Added, Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION No. CLR. CR. 242/11-12, DATED 26-05-2012.**

It is clarified that `Waste Plastic Scrap' is liable to tax at 5% as per serial No. 133 of Notification No.FD 197 CSL 2005(6) dated: 30-04-2005 read with entry 51 of the Third Schedule to the Karnataka Value Added Tax Act, 2003.

**PRADEEP SINGH KHAROLA**
Commissioner of Commercial Taxes,
(Karnataka) Bangalore.

**P.R. 770**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES (KARNATAKA) BANGALORE-CLARIFICATION UNDER SECTION 59 (4) OF THE KARNATAKA VALUE ADDED TAX ACT-2003.

**Sub:** KVAT Act, 2003-Clarification under Section 59(4) regarding the rate of tax applicable on certain goods-reg.

**Ref:** Application dated. 07-10-2011 of M/s H.D. Silva & Company, Mangalore-575 001 – TIN – 29750099267.

In the application cited above M/s H.D. `Silva & Company, K.S.Rao Road, Opp: Prabhat Talkies, Mangalore-575 001 has sought clarification regarding the rate of tax applicable on certain commodities.

2. Section 59(4) of the Karnataka Value Added, Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION No. CLR. CR. 133/2011-12, DATED 23-05-2012.**

It is hereby clarified that the rates of tax applicable on the following goods are as indicated below :

| Sl.No. | Goods | Rate of tax |
|---|---|---|
| 1 | Oil Expellar machine and parts of Oil Expeller machine, Rotary Oil Mill (Oil Ghana), Parts of Rotary Oil Mill | 14% under Section 4(1) (b) of the KVAT Act, 2003. |
| 2 | (i) Flour Milling Pulveriser | 5% under entry 38 of the table in Notification No. FD 316 CSL 2005(I) dated 05-08-2005. |
| | (ii) Parts of Pulveriser | 14% under Section 4(1) (b) of the KVAT Act, 2003. |
| 3 | (i) Coffee Grinder | 5% under entry 41 of the table in Notification No. FD 316 CSL 2005(I) dated 05-08-2005. |
| | (ii) Parts of Coffee Grinder | 14% under Section 4(1) (b) of the KVAT Act, 2003. |
| 4 | Coffee seed Roasting Machine | 5% under entry 41 of the table in Notification No. FD 316 CSL 2005(I) dated 05-08-2005. |
| 5 | Flour Shifter and grading Machines | 5% under entry 38 of the table in Notification No. FD 316 CSL 2005(I) dated 05-08-2005. |
| 6 | Parts of Stone crusher | 14% under Section 4(1) (b) of the KVAT Act, 2003. |

**PRADEEP SINGH KHAROLA**
Commissioner of Commercial Taxes,
(Karnataka) Bangalore.

**P.R. 771**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES (KARNATAKA), BANGALORE-CLARIFICATION UNDER SECTION 59 (4) OF THE KARNATAKA VALUE ADDED TAX ACT-2003.

**Sub:** KVAT Act, 2003-Clarification under Section 59(4) regarding the rate of tax applicable on certain goods - reg.

**Ref:** Application dated. 07-03-2012 of M/s Leo Metal Pvt.Ltd, Bangalore- 560099. TIN – 29460074158.

In the application cited above M/s Leo Metal Pvt.Ltd, No. 235-B, Bommasandra Industrial Area, Anekal Taluk, Bangalore-560099 has sought clarification regarding the rate of tax applicable on `Aluminium circles, sheets, Pressure cooker & Non stick utensils.

2. Section 59(4) of the Karnataka Value Added, Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION No. CLR. CR. 234/11-12, DATED 18-05-2012.**

It is hereby clarified that the rates of tax applicable on the following goods are as indicated under :-

| Sl.No. | Goods | Rate of tax |
|---|---|---|
| 1 | Aluminium circles | 5% under entry 67 of the Third Schedule to the KVAT Act, 2003. |
| 2 | Aluminium Sheets | 5% under entry 67 of the Third Schedule to the KVAT Act, 2003. |
| 3 | Pressure Cooker | 5% under entry 5 of the Third Schedule to the KVAT Act, 2003. |
| 4 | Non-Stick utensils | 5% under entry 5 of the Third Schedule to the KVAT Act, 2003. |

**PRADEEP SINGH KHAROLA**
Commissioner of Commercial Taxes,
(Karnataka), Bangalore.

**P.R. 772**

**ಕಂದಾಯ ಸಚಿವಾಲಯ**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96.**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 323 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ: 06.06.2012.**

ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ 68ನೇ ಪ್ರಕರಣದ (5)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ:03–10–2009ರ ದಿನಾಂಕದ ಎಲ್‌ಎನ್‌ಡಿ/ಸಿಆರ್–467/08–09ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಬಿ–ಖರಾಬು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲಾತಿ ಹಾಗೂ ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ ಇವರ ವರದಿ ಮೇರೆಗೆ ಪರಿಶೀಲಿಸಿದ ನಂತರ ಸರ್ಕಾರಿ ಬಿ–ಖರಾಬು ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ಕಾಡುಗೋಡಿ, ಬಿದರಹಳ್ಳಿ ಹೋಬಳಿ |
| ತಾಲ್ಲೂಕು | ಬೆಂಗಳೂರು ಪೂರ್ವ ತಾಲ್ಲೂಕು |
| ಜಿಲ್ಲೆ | ಬೆಂಗಳೂರು ನಗರ ಜಿಲ್ಲೆ |
| ಸದರಿ ಭಾಗದ ವರ್ಣನೆ | ಧರ್ಮದ ತೋಪು |
| ಸರಿ ಸುಮಾರು ವಿಸ್ತೀರ್ಣ | 0–20 ಗುಂಟೆ (ಸರ್ವೆ.ನಂ.295) |
| ಮೇರೆಗಳು | ಪೂರ್ವಕ್ಕೆ: ಸ.ನಂ.295ರ ಉಳಿಕೆ ಜಮೀನು<br>ಪಶ್ಚಿಮಕ್ಕೆ: ಸ.ನಂ.297ರ ಜಮೀನು<br>ಉತ್ತರಕ್ಕೆ: ಸ.ನಂ.297ರ ಜಮೀನು<br>ದಕ್ಷಿಣಕ್ಕೆ: ರಸ್ತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ).

**ಪಿ.ಆರ್. 813**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ಕ್ರ.ಸಂ. ಡಿಆರ್‌ಡಿ/ಎಲ್‌ಕ್ಯೂಡಿ/ ಸಿಆರ್/ /2011–2012 ದಿನಾಂಕ: 29–03–2012.**

**ವಿಷಯ:–** ಸಮಾಪನೆಯಲ್ಲಿರುವ ಕನಕ ಕೋಳಿ ಸಾಕಾಣಿಕೆದಾರರ ಮತ್ತು ಮಾರಾಟಗಾರರ ಸಹಕಾರ ಸಂಘ ನಿ. ಗೊರ್ಲಕಟ್ಟೆ, ಚಳ್ಳಕೆರೆ ತಾಲ್ಲೂಕು ಇದರ ನೋಂದಣಿ ರದ್ದತಿ ಮಾಡುವ ಬಗ್ಗೆ.

**ಉಲ್ಲೇಖ:–**
1. ಈ ಕಛೇರಿ ಆದೇಶ ಸಂಖ್ಯೆ/ಡಿಆರ್‌ಡಿ/ಎಲ್‌ಕ್ಯೂಡಿ /ಸಿಆರ್/ 27/2010–11 ದಿನಾಂಕ: 30–12–2010.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ/ಸನಿ/30/838/ ನೋಂದಣಿರದ್ಧತಿ/ಸಿಆರ್/2011–12 ದಿನಾಂಕ: 17–03–2012.

**ಪ್ರಸ್ತಾವನೆ : –**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಕನಕ ಕೋಳಿ ಸಾಕಾಣಿಕೆದಾರರ ಮತ್ತು ಮಾರಾಟಗಾರರ ಸಹಕಾರ ಸಂಘ ನಿ. ಗೊರ್ಲಕಟ್ಟೆ ಚಳ್ಳಕೆರೆ ತಾಲ್ಲೂಕು ಇದರ ನೋಂದಣಿ ಸಂಖ್ಯೆ/ಸನಿ30/ 78/ಆರ್‌ಜಿಎನ್/30487/2001–02 ದಿನಾಂಕ: 09–08–2001 ರಂದು ನೋಂದಣಿಯಾಗಿದ್ದು, ಸಂಘವು 2008–09 ರಿಂದ ಯಾವುದೇ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿದ್ದು, ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನ:ಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ: 27–01–2012 ರಂದು ನಡೆದಿದ ಸಮಾಪನಾಧಿಕಾರಿಗಳ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮಾಡಿ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ದಿನಾಂಕ: 31–03–2011 ರ ಅಂತ್ಯಕ್ಕೆ ಶೂನ್ಯ ಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರಿಸಿದಲ್ಲಿ ಸಂಘದ ಸದಸ್ಯರುಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಪರಿಶೀಲಿಸಿ ಉಲ್ಲೇಖ (2) ರ ಪತ್ರದಲ್ಲಿ ಸದರಿ ಸಂಘದ ನೋಂದಣಿಯನ್ನು ರದ್ದು ಪಡಿಸಲು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದೆ. ಸಮಾಪನಾಧಿಕಾರಿಗಳು ದಿನಾಂಕ: 27–01–2012 ರಂದು ನಡೆಸಿರುವ ಸಮಾಪನಾ ನಡವಳಿ ಸ್ವಯಂ ವೇದ್ಯವಾಗಿರುವುದರಿಂದ ಸಮಾಪನಾಧಿಕಾರಿಗಳ ವರದಿಯ ಮೇರೆಗೆ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**–ಆದೇಶ –**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ/ಸಿಓ/1391/ಸಿಎಲ್‌ಎಂ/2010 ಬೆಂಗಳೂರು ದಿನಾಂಕ: 17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್, ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಕನಕ ಕೋಳಿ ಸಾಕಾಣಿಕೆದಾರರ ಮತ್ತು ಮಾರಾಟಗಾರರ ಸಹಕಾರ ಸಂಘ ನಿ. ಗೊರ್ಲಕಟ್ಟೆ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈ ಸಂಘದ ನೋಂದಣಿ ಸಂಖ್ಯೆ/ ಸನಿ/30/78/ಆರ್‌ಜಿಎನ್/30487/2001–02 ದಿನಾಂಕ: 09–08–2001 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿರುತ್ತೇನೆ. ಈ ದಿನದಿಂದ ಸಂಘವು ಆಸ್ತಿತ್ವವನ್ನು ಕಳೆದು ಕೊಂಡಿರುತ್ತದೆ. ಸಮಾಪನಾಧಿಕಾರಿಗಳು ಸಂಘದ ಎಲ್ಲಾ ದಾಖಲೆಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರಿಗೆ ಒಪ್ಪಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 29–03–2012 ರಂದು ನೀಡಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
**ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಪಿ.ಆರ್. 639**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ

**ನಂ: ಡಿಆರ್‌ಡಿ: ಎಲ್‌ಕ್ಯೂಡಿ : ಸಿಆರ್ : /2011–12 ದಿನಾಂಕ: 29–03–2012.**

**ವಿಷಯ:–** ಸ್ಥಗಿತಗೊಂಡಿರುವ ನಾಯಕನಹಟ್ಟಿ ಪರಿಶಿಷ್ಟ ಜಾತಿ/ವರ್ಗದ ಮೀನುಗಾರರ ಸಹಕಾರ ಸಂಘ ನಿ. ಚಳ್ಳಕೆರೆ ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:–** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ: ಸನಿ:30: ಸಮಾಪನೆ: ಸಿಆರ್/ 81 /10–11 ದಿನಾಂಕ:16–03–2011.

2 ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ ದಿನಾಂಕ: 09–02–2012

**ಪ್ರಸ್ತಾವನೆ : –**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ನಾಯಕನಹಟ್ಟಿ ಪರಿಶಿಷ್ಟ ಜಾತಿ/ವರ್ಗದ ಮೀನುಗಾರರ ಸಹಕಾರ ಸಂಘ ನಿ. ಚಳ್ಳಕೆರೆ ಸಂಘದ ನೋಂದಣಿ ಸಂಖ್ಯೆ: ಸನಿ/30/ಆರ್‌ಎಸ್‌ಆರ್/ 19074/ಸಿಆರ್/4/91–92 ದಿನಾಂಕ:30–09–1991 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸದರಿ ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸನ್ನು ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಸದರಿ ಸಂಘದ ಆಡಳಿತ ಮಂಡಳಿ ಸದಸ್ಯರುಗಳು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಇದರಿಂದ ಸಂಘವು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**" ಆದೇಶ "**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಓ/201/ಸಿಎಲ್‌ಎಂ: 2010 ಬೆಂಗಳೂರು ದಿನಾಂಕ: 17–02–2011 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂದಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ನಾಯಕನಹಟ್ಟಿ ಪರಿಶಿಷ್ಟ ಜಾತಿ/ವರ್ಗದ ಮೀನುಗಾರರ ಸಹಕಾರ ಸಂಘ ನಿ. ಚಳ್ಳಕೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ: 29–03–2012 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,<br>ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಪಿ.ಆರ್. 642**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ

**ನಂ: ಡಿಆರ್‌ಡಿ: ಸಮಾಪನೆ/ ಸಿಆರ್ /2011–12 ದಿನಾಂಕ: 29–03–2012.**

**ವಿಷಯ:–** ಸ್ಥಗಿತಗೊಂಡಿರುವ ಸಾಲೇಶ್ವರ ಹತ್ತಿ ಮತ್ತು ರೇಷ್ಮೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ. ಚಿಕ್ಕಳ್ಳಿ, ಚಳ್ಳಕೆರೆ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ:–** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ: ಸನಿ:30: ಸಮಾಪನೆ: ಸಿಆರ್/ 80 /10–11 ದಿನಾಂಕ:16–03–2011.

2 ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ ದಿನಾಂಕ: 09–02–2012

**ಪ್ರಸ್ತಾವನೆ : –**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಸಾಲೇಶ್ವರ ಹತ್ತಿ ಮತ್ತು ರೇಷ್ಮೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ. ಚಿಕ್ಕಳ್ಳಿ, ಚಳ್ಳಕೆರೆ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ: ಸನಿ30/ 84/ಆರ್‌ಜಿಎನ್/30493/01–02 ದಿನಾಂಕ: 24–11–2001 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸದರಿ ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸನ್ನು ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಸದರಿ ಸಂಘದ ಆಡಳಿತ ಮಂಡಳಿ ಸದಸ್ಯರುಗಳು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಇದರಿಂದ ಸಂಘವು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**" ಆದೇಶ "**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಓ/201/ಸಿಎಲ್‌ಎಂ: 2010 ಬೆಂಗಳೂರು ದಿನಾಂಕ: 17–02–2011 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂದಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಸಾಲೇಶ್ವರ ಹತ್ತಿ ಮತ್ತು ರೇಷ್ಮೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ. ಚಿಕ್ಕಳ್ಳಿ, ಚಳ್ಳಕೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ: 29–03–2012 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಪಿ.ಆರ್. 641**

## FOREST, ENVIRONMENT & ECOLOGY SECRETARIAT

**No. FEE 186 FAP 2011 Bangalore, dated: 24-03-2012**

**NOTIFICIATION**

In pursuance of the direction of the Ministry of Environment and Forest in the Contingency Action Plan, the Government of Karnataka is pleased to constitute a three tier Crisis Management System for Prevention & Control of Forest Fires in the State as follows:-

| **I. State Level Crisis Group** | | | |
|---|---|---|---|
| 1. | Chief Secretary | - | Chairman |
| 2. | Principal Secretary (Agriculture) | - | Member |
| 3. | Principal Secretary (Revenue) | - | Member |
| 4. | Principal Secretary, Rural Development and Panchayat Raj | - | Member |
| 5. | Principal Secretary,<br>Forest, Ecology & Environment | - | Member |

| | | | |
|---|---|---|---|
| 6. | Principal Secretary,<br>Health Services and Family planning | - | Member |
| 7 | Director General of police<br>(Fire & Emergency services) | - | Member |
| 8 | Principal Chef Conservator of Forest | - | Member |
| 9 | Addl. Principal Chief Conservator of Forests (Forest Resource Management) | - | Member Secretary |

The functions of the state Level Group (SCG) are:-

a) The SCG shall be the apex body in the State to formulate policy and guidelines for prevention and control oforest fires.

b) To approve the plans and mitigation measures for prevention and control of forest fires.

c) Monitor the functions of the DCG and TCG

| **II. District Level Crisis Group** | | | |
|---|---|---|---|
| 1. | Deputy Commissioner | - | Chairman |
| 2. | CEO (Zilla Panchayat) | - | Member |
| 3. | Superintendent of Police | - | Member |
| 4. | Deputy Director/ Joint Director of Agriculture | - | Member |
| 5. | District Watershed Development Officer | - | Member |
| 6. | District Commandant, Home Guards | - | Member |
| 7 | District Health & Family Welfare Officer | - | Member |
| 8 | District Fire Officer,<br>(Fire and Emergency Services) | - | Member |
| 9 | Deputy Conservator of Forest (Territorial) | - | Member Secretary |

The Functions of District Level Crisis Group (DCG) are:-

a) The DCG shall be the apex body in the district to co-ordinate and deal with major forest fires in the district;

b) Continuously monitor every forest fire in the district;

c) Furnish a detailed report on forest fire incidents in the district to the State Crisis Group;

d) Conduct awareness and management on prevention and control of forest fires in the district;

| **III. Taluk Level Crisis Group** | | | |
|---|---|---|---|
| 1. | Tahsildar | - | Chairman |
| 2. | Executive Officer, Taluk Panchayat | - | Member |
| 3. | Taluk level Medical officer | - | Member |
| 4. | Police Circle Inspector | - | Member |
| 5. | Taluk level officer of Fire Services Department | - | Member |
| 6. | Asst. director of Agriculture | - | Member |
| 7. | Range Forest Officer (Territorial) | - | Member Secretary |

The functions of Taluk Level Crisis Group (TCG) are:

a) The Taluk Level Crisis Group (LCG) shall be responsible for preventing and controlling of forest fires in taluk.

b) Organize and mobilize manpower for prevention and control of forest fires.

c) Training of local personnel involved in forest fire management;

d) Conduct awareness and training on prevention and control of forest fires;

The Department of Forests, Ecology, Environment, Government of Karnataka designated as the Nodal Department for prevention and control of forest fires in the State as per the direction of the Ministry of Environment & Forests.

The Nodal Department shall be responsible for formulation of plans and programmes.

The Forest Fire cell to be created in the office of the PCCF Headed by APCCF (FRM).

The Constitution of the three tier crisis Groups shall come into force with effect from the date of publication of this Notification in the Karnataka Gazette.

By order and in the name of Governor of Karnataka

**Umadevi**

Under Secretary to Government,

Forest, Environment & Ecology Department.

**PR - 462**

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

## ಸಂಖ್ಯೆ: ಎಸ್‌ಡಿಕೆ/33/ಡಿಟಿಸಿಆರ್/2010-11, ದಿನಾಂಕ: 26-04-2012

**ಉಪಸ್ಥಿತರು:** ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು, ಸುಬ್ರಹ್ಮಣ್ಯ ಪೊಲೀಸು ಠಾಣೆ, ಸುಬ್ರಹ್ಮಣ್ಯ

1) ಹರೀಶ್ ರೈ.ಟಿ, 30 ವರ್ಷ , ಬಿನ್:ನಾರಾಯಣ ರೈ, ವಾಸ:ಟಪ್ಪಾಲು ಕಟ್ಟೆ, ಪಾಜಪಳ್ಳ ಮನೆ, ಬಾಳಿಲ ಗ್ರಾಮ, ಸುಳ್ಯ ತಾಲೂಕು (ವಾಹನದ ಮಾಲೀಕರು/ಅರೋಪಿತರು)

2) ಶ್ರೀ.ಗಂಗಾಧರ ಗೌಡ, ಬಿನ್: ದಿ: ಬಾಬು ಗೌಡ, ವಾಸ:ಅಲೆಂಗಾರ ಮನೆ, ಎಣ್ಮೂರು ಗ್ರಾಮ ಮತ್ತು ಅಂಚೆ ,ಸುಳ್ಯ ತಾಲೂಕು (ಅರೋಪಿತರು)

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಸುಬ್ರಹ್ಮಣ್ಯ ಪೊಲೀಸ್ ಠಾಣೆ ,ಸುಬ್ರಹ್ಮಣ್ಯ ಇವರು ದಿನಾಂಕ:09–09–2010 ರಂದು ರಾತ್ರಿ 11–30 ಗಂಟೆ ಸಮಯಕ್ಕೆ ಸುಳ್ಯ ತಾಲೂಕು ಎಣ್ಮೂರು ಗ್ರಾಮದ ನಿಂತಿಕಲ್ಲು ಜಂಕ್ಷನ್ ಬಳಿ ಬೆಳ್ಳಾರೆ ಕಡೆಯಿಂದ ನಿಂತಿಕಲ್ಲು ಕಡೆಗೆ KA–21–J–4714 ಮೋಟಾರ್ ಸೈಕಲ್ ಬರುತ್ತಿರುವುದನ್ನು ಕಂಡು ಖಚಿತ ಮಾಹಿತಿಯಂತೆ ಸದ್ರಿ ವಾಹನವನ್ನು ತಡೆದು ತಪಾಸಣೆ ಮಾಡಿದಾಗ ಪಾಲಿಥೀನ್ ಚೀಲದೊಳಗೆ 2 ರಟ್ಟಿನ ಪೆಟ್ಟಿಗೆಗಳಲ್ಲಿ 17.280 ಲೀ ಮದ್ಯವನ್ನು ಹೊಂದಿ ಅಕ್ರಮವಾಗಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ ಇದು ಕರ್ನಾಟಕ ಅಬಕಾರಿ ಕಾಯಿದೆ 11ರಂತೆ ಅಪರಾಧ ಹಾಗೂ 32(1), 34ರಂತೆ ಶಿಕ್ಷಾರ್ಹವಾಗಿರುವುದರಿಂದ, ಅರೋಪಿಗಳಾದ 1) ಹರೀಶ್ ರೈ. ಟಿ. ಪ್ರಾಯ:30 ವರ್ಷ , ಬಿನ್:ನಾರಾಯಣ ರೈ, ವಾಸ:ಟಪ್ಪಾಲು ಕಟ್ಟೆ, ಪಾಜಪಳ್ಳ ಮನೆ, ಬಾಳಿಲ ಗ್ರಾಮ, ಸುಳ್ಯ ತಾಲೂಕು 2) ಗಂಗಾಧರ ಗೌಡ, ಬಿನ್: ದಿ: ಬಾಬು ಗೌಡ, ವಾಸ: ಅಲೆಂಗಾರ ಮನೆ, ಎಣ್ಮೂರು ಗ್ರಾಮ ಮತ್ತು ಅಂಚೆ ,ಸುಳ್ಯ ತಾಲೂಕು ಇವರುಗಳ ವಿರುದ್ಧ ಕ್ರೈಂ ಸಂ: 71/2010 ದಿ:10–9–2010ರಂತೆ ಮೊಕದ್ದಮೆ ದಾಖಲಿಸಿಕೊಂಡು, ಪ್ರಕರಣದ ಸೊತ್ತು ಕಡತವನ್ನು ವಿಲೇಯ ಮುಂದಿನ ಕಾನೂನು ಕ್ರಮದ ಬಗ್ಗೆ ಅಧಿಕೃತ

ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ ಜಿಲ್ಲೆ ಮಂಗಳೂರುರವರ ದಿ:22–9–2010ರ ಆದೇಶದಂತೆ ಅಬಕಾರಿ ಇಲಾಖೆಯ ಪರ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

**ಜಪ್ತುಪಡಿಸಿದ ಸೊತ್ತುಗಳು ಈ ಕೆಳಗಿನಂತಿವೆ:**

1) ಮೋಟಾರ್ ಸೈಕಲ್ ನೊಂದಣಿ ನಂ:KA-21-J-4714

2) ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂಎಲ್‌ನ ವಿಂಡ್ಸರ್ ಡಿಲಕ್ಸ್ ವಿಸ್ಕಿಯ 48 ಬಾಟಲಿಗಳಲ್ಲಿ – 8.640 ಲೀ ಮದ್ಯ

3) ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂಎಲ್‌ನ ಶಾಟ್ ಡಿಲಕ್ಸ್ ವಿಸ್ಕಿಯ 48 ಬಾಟಲಿಗಳಲ್ಲಿ – 8.640 ಲೀ ಮದ್ಯ.

(ಪ್ರತಿ ಪೆಟ್ಟಿಗೆಯಿಂದ ತಲಾ ಒಂದೊಂದರಂತೆ 180 ಎಂಎಲ್‌ನ 2 ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

4) ನಸು ಹಳದಿ ಪಾಲಿಥೀನ್ ಗೋಣಿ ಚೀಲ –1

ವಾಹನದ ನೊಂದಾಣಿ ಮಾಲಿಕರಾದ ಶ್ರೀ.ಹರೀಶ್ ಟಿ., ಬಿನ್: ನಾರಾಯಣ ರೈ, ಟಪ್ಪಾಲ್ ಕಟ್ಟೆ ಹೌಸ್, ಮುಪ್ಪೇರಿಯಾ, ಸುಳ್ಯ ತಾಲೂಕು ಇವರು ಈ ಪ್ರಾಧಿಕಾರಕ್ಕೆ ದಿ:26–10–2010ರಂದು ವಾಹನದ ಆರ್.ಸಿ ಪುಸ್ತಕದ ಪ್ರತಿಯೊಂದಿಗೆ ತಮ್ಮ ವಕೀಲರ ಮೂಲಕ ಅರ್ಜಿ ಸಲ್ಲಿಸಿ, ವಾಹನದ ಮದ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿಯವರ ಅರ್ಜಿಯನ್ನು ಪರಿಶೀಲಿಸಿ ಅಧಿಕೃತ ಅಧಿಕಾರಿಗಳ ಪ್ರಾಧಿಕಾರದಿಂದ ದಿ:27–1–2011 ರಂದು ಹೊರಡಿಸಿದ ಆದೇಶದಲ್ಲಿ ವಾಹನದ ಮೌಲ್ಯಕ್ಕೆ ಸಮಾನವಾದ ರೂ.15,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿಯನ್ನು ಒದಗಿಸುವ ಹಾಗೂ ಇತರೆ ಷರತ್ತುಗಳ ಆಧಾರದ ಮೇಲೆ ವಾಹನವನ್ನು ನೊಂದಾಣಿ ಮಾಲೀಕರ ಸುಪರ್ದಿಗೆ ಮದ್ಯಂತರ ಬಿಡುಗಡೆ ಗೊಳಿಸಲಾಗಿರುತ್ತದೆ. ಸದ್ರಿ ಆದೇಶದಂತೆ ವಾಹನದ ಮಾಲೀಕರು ರೂ.15,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿ ಪತ್ರ ಸಂ: –ಇಲ್ಲ–, ದಿ : 10–2–2011ರಂದು ವಿಜಯ ಬ್ಯಾಂಕ್,ಸುಳ್ಯ ಇಲ್ಲಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು ಸದ್ರಿ ಬ್ಯಾಂಕ್ ಗ್ಯಾರೆಂಟಿಯ ಮಾನ್ಯತೆ ಅವಧಿಯು ದಿ:10–2–2013ರ ತನಕ ಊರ್ಜಿತದಲ್ಲಿರುತ್ತದೆ.

ಪ್ರಕರಣಕ್ಕೆ ಸಂಬಂಧಿಸಿದಂತೆ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಪೊಲೀಸ್ ಅಧಿಕಾರಿಗಳೇ ಒಳಪಡಿಸಿದ್ದು ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನ ಪರೀಕ್ಷಕರು ,ಮಂಗಳೂರು ವಲಯ,ಮಂಗಳೂರು ಇವರ ವರದಿ ಸಂ: ಇ–202–2 ದಿ:13–10–2010 ರಲ್ಲಿ ಮದ್ಯದ ಮದ್ಯಸಾರದ ಪ್ರಮಾಣ 43.0% ಆಗಿರುವುದಾಗಿ ದೃಡೀಕರಣ ನೀಡಿರುತ್ತಾರೆ. ತನಿಖಾಧಿಕಾರಿಗಳ ಶಿಪಾರಸ್ಸಿನಂತೆ ಜಪ್ತುಪಡಿಸಿಕೊಳ್ಳಲಾಗಿರುವ ಮದ್ಯವನ್ನು ಪ್ರಾಧಿಕಾರದ ದಿ:4–2–2011ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಿಯಮಾನುಸಾರ ಮದ್ಯವನ್ನು ನಾಶಪಡಿಸಲು ಆದೇಶಿಸಲಾಗಿದ್ದು, ಸದ್ರಿ ಆದೇಶದಂತೆ ಮದ್ಯವನ್ನು ದಿ:25–3–2011ರಂದು ನಾಶಪಡಿಸಲಾಗಿರುತ್ತದೆ.

ವಾಹನದ ಮಾಲೀಕರು ವಾಹನ ಮದ್ಯಂತರ ಬಿಡುಗಡೆ ಬಗ್ಗೆ ಸಲ್ಲಿಸಿದ್ದ ಅರ್ಜಿಯ ಜೊತೆಯಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ ಜಿಲ್ಲೆ ಮಂಗಳೂರು ಇವರಿಂದ ಪಡೆಯಲಾದ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಶ್ರೀ.ಹರೀಶ್ ಟಿ, ಬಿನ್: ನಾರಾಯಣ ರೈ, ಟಪ್ಪಾಲ್ ಕಟ್ಟೆ ಹೌಸ್, ಮುಪ್ಪೇರಿಯಾ, ಸುಳ್ಯ ತಾಲೂಕು ಇವರು ಸದ್ರಿ ವಾಹನದ ನೊಂದಾಣಿ ಮಾಲೀಕರಾಗಿರುವುದು ದೃಡಪಟ್ಟಿರುವುದರಿಂದ , ಸದ್ರಿ ವಾಹನದ ಮಾಲೀಕರಿಗೆ ಹಾಗೂ ಪ್ರಕರಣದ ಆರೋಪಿತ ವ್ಯಕ್ತಿಗೆ ಜಪ್ತುಪಡಿಸಿದ ವಾಹನ ಮತ್ತು ಸೊತ್ತುಗಳನ್ನು ಯಾಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಬಿ ರಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ದಿ:8–3–2011ರಂದು ನೊಂದಾಯಿತ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸು ವಾಹನದ ಮಾಲೀಕರಿಗೆ ದಿ: 20–3–2011ರಂದು ಹಾಗೂ ಅರೋಪಿತ ವ್ಯಕ್ತಿ ಗಂಗಾಧರ ಗೌಡ ಇವರಿಗೆ ದಿ:21–3–2011ರಂದು ಜಾರಿಯಾಗಿದ್ದು, ಯಾರಿಂದಲೂ ಸಮಜಾಯಿಷಿ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ .

ನಂತರ ಪ್ರಕರಣದಲ್ಲಿ ವಿಚಾರಣೆಯನ್ನು ಪ್ರಾರಂಬಿಸಿ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅಭಿಯೋಗದ ಪರ ಪ್ರಾ.ಸಾ–1 ರಿಂದ 3ರವರನ್ನು ವಿಚಾರಣೆ ನಡೆಸಿ ನಿಶಾನೆ ಪಿ–1ರಿಂದ 9ರವರೆಗೆ ಹಾಗೂ ರಕ್ಷಣಾ ಪರ ಡಿಡಬ್ಲ್ಯೂ –1 ರವರನ್ನು ವಿಚಾರಣೆ ನಡೆಸಿ ನಿಶಾನೆ ಪಿ–1ರಿಂದ 2ರವರೆಗೆ ದಾಖಲೆಗಳನ್ನು ಗುರುತಿಸಿಕೊಳ್ಳಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

**ವಿವಾಧಾಂಶಗಳು**

1) ದಿನಾಂಕ:09–09–2010ರಂದು ಮೋಟಾರ್ ಸೈಕಲ್ ನೊಂದಣಿ ಸಂ: KA-21-J-4714 ರಲ್ಲಿ ಸಾಗಾಣಿಕೆಯಾದ ಸೊತ್ತು ಮದ್ಯ ಎಂಬ ಬಗ್ಗೆ ರಸಾಯನಿಕ ವಿಶ್ಲೇಷಣಾ ವರದಿಯಿಂದ ದೃಡೀಕೃತವಾಗಿದೆಯೇ?

2) ದಿನಾಂಕ: 09-9-2010ರಂದು ಮೋಟಾರ್ ಸೈಕಲ್ ನೊಂದಣಿ ಸಂ: KA-21-J-4714 ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

3) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತನ್ನ ಗಮನಕ್ಕೆ ಬಾರದೇ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆಯಡಿ ಮದ್ಯ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

4) ಜಪ್ತು ಪಡಿಸಲಾಗಿರುವ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಮತ್ತು ಎರಡನೇ ಅಂಶಗಳನ್ನು ಗುಣಾತ್ಮಕವಾಗಿ, ಮೂರನೇ ಅಂಶವನ್ನು ನಕರಾತ್ಮಕವಾಗಿ ಹಾಗೂ ನಾಲ್ಕನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:–**

ಪ್ರಕರಣದ ತನಿಖಾಧಿಕಾರಿಯಾದ ಶ್ರೀ.ಶಿವಪ್ರಸಾದ್,ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರು ದಿ:4–8–2011 ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ , 2010ರಿಂದ ಜುಲಾಯಿ 2011ರವರೆಗೆ ಸುಳ್ಯ ವಲಯದಲ್ಲಿ ಅಬಕಾರಿ ನಿರೀಕ್ಷಕರಾಗಿ ಹೆಚ್ಚುವರಿ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೆ. ಅಧಿಕೃತ ಅದಿಕಾರಿಗಳ ದಿ:22–9–2010ರ ಅದೇಶದಂತೆ ಸುಬ್ರಹ್ಮಣ್ಯ ಪೊ.ಠಾಣೆ ಕ್ರೈಂ:71/2010ರಲ್ಲಿ ವಶಪಡಿಸಿಕೊಂಡ ಸೊತ್ತನ್ನು ದಿ:10–11–2010ರಂತೆ ಸ್ವೀಕರಿಸಿರುತ್ತೇನೆ. ಈ ಬಗ್ಗೆ ಅಧಿಕೃತ ಅಧಿಕಾರಿಗೆ ಒಂದು ವರದಿ ಸಲ್ಲಿಸಿದ್ದು ಅದು ನಿ.ಪಿ–1 ಎಂದು, ಅದರ ಮೇಲಿನ ಸಹಿ ನಿ.ಪಿ–1 ಎ ಎಂದು ಗುರುತಿಸಿ, ಸದ್ರಿ ಪ್ರಕರಣದಲ್ಲಿ ವಶಪಡಿಸಿದ ಹಿರೋ ಹೊಂಡಾ ಬೈಕ್ ಸಂ:KA-21-J-4714 ರ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಪುತ್ತೂರು ಇವರಿಗೆ ಬಿ ವರದಿ ಮತ್ತು ಮೌಲ್ಯ ಮಾಪನ ವರದಿಯನ್ನು ಕಳುಹಿಸಿಕೊಡುವಂತೆ ವಿನಂತಿಸಿದ ಮೇರೆಗೆ ದಿ:19–11–2010ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ವಾಹನದ ಮೌಲ್ಯಮಾಪನ ವರದಿ ಹಾಗೂ 23–11–10ರಂದು ಬಿ ವಹಿ ವರದಿಯನ್ನು ಪಡೆದಿರುತ್ತೇನೆ, ಅವುಗಳನ್ನು ಕ್ರಮವಾಗಿ ನಿ.ಪಿ–2 ಮತ್ತು 3 ಎಂದು ಗುರುತಿಸಿ, ನಂತರ ಸುಬ್ರಹ್ಮಣ್ಯ ಪೊ.ಉ.ನಿ ರಿಂದ ರಸಾಯನಿಕ ವಿಶ್ಲೇಷಣಾ ವರದಿ ಸ್ವೀಕರಿಸಿರುತ್ತೇನೆ, ಸದ್ರಿ ವರದಿಯನ್ನು ಅದು ನಿ.ಪಿ–4 ಎಂದು ಗುರುತಿಸಿ, ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾದ ವಾಹನದ ಮಧ್ಯಂತರ ಬಿಡುಗಡೆಗೆ ಅಕ್ಷೇಪಣೆಯನ್ನು ದಿ:30–11–2010 ರಂದು ಸಲ್ಲಿಸಿದ್ದು, ಅದು ನಿ.ಪಿ–5ರಲ್ಲಿದೆ, ನಿ.ಪಿ–5 ಎ ರಲ್ಲಿ ನನ್ನ ಸಹಿ ಇದೆ, ಈ ಪ್ರಕರಣದಲ್ಲಿ ವಶಪಡಿಸಿದ ಸೊತ್ತನ್ನು ಮುಟ್ಟುಗೋಲು ಹಾಕಲು ಮಾನ್ಯ ಅಧಿಕೃತ ಅದಿಕಾರಿಗೆ ಒಂದು ವರದಿ ಸಲ್ಲಿಸಿದ್ದು, ಸದ್ರಿ ವರದಿಯು ನಿ.ಪಿ–6 ರಲ್ಲಿದೆ , ನಿ.ಪಿ–6ಎ ಸಹಿ ಆಗಿರುತ್ತದೆ ಎಂದು ಸಾಕ್ಷ್ಯ ನುಡಿದಿರುತ್ತಾರೆ.

**ಪ್ರಾ.ಸಾ–2:–**

ಪ್ರಕರಣದ ಫಿರ್ಯಾದುದಾರರಾದ ಶ್ರೀ.ಸುನಿಲ್ ಎಂ.ಎಸ್, ಪೊ.ಉ.ನಿ ಸುಬ್ರಹ್ಮಣ್ಯ ಪೊ.ಠಾಣೆ ಇವರು ದಿ:8–9–2011 ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ , ದಿ:26–10–2009ರಿಂದ ಸುಬ್ರಹ್ಮಣ್ಯ ಪೊ.ಠಾಣೆಯಲ್ಲಿ ಪೊ.ಉ.ನಿ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ:9–9–2010ರ ರಾತ್ರಿ ಗಸ್ತುನಲ್ಲಿರುವಾಗ ತನಗೆ ಬಂದ ಖಚಿತ ಮಾಹಿತಿಯಲ್ಲಿ ಬೆಳ್ಳಾರೆ ಕಡೆಯಿಂದ ನಿಂತಿಕಲ್ಲು ಕಡೆಗೆ ಒಂದು ದ್ವಿಚಕ್ರ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿದ್ದಾರೆಂದು ತಿಳಿದು ಬಂದ ಮೇರೆಗೆ ,ಸಿಬಂಧಿಗಳೊಂದಿಗೆ ನಿಂತಿಕಲ್ಲು ಜಂಕ್ಷನ್ ಬಳಿ ಕಾಯುತ್ತಿದ್ದಾಗ ರಾತ್ರಿ ಸುಮಾರು 11 ಗಂಟಗೆ ಬೆಳ್ಳಾರೆ ಕಡೆಯಿಂದ ನಿಂತಿಕಲ್ಲು ಕಡೆಗೆ 1 ಮೋಟಾರ್ ಸೈಕಲಿನಲ್ಲಿ ಇಬ್ಬರು ವ್ಯಕ್ತಿಗಳು ಬರುತ್ತಿದ್ದು, ಬೈಕ್ ಸಮೇತ ಅವರನ್ನು ತಡೆದು ನಿಲ್ಲಿಸಿ ವಿಚಾರಿಸಿದಾಗ ಹಿಂಬದಿ ಸವಾರನ ಕೈಯಲ್ಲಿ 1 ಪಾಲಿಥೀನ್ ಗೋಣಿ ಚೀಲ ಇದ್ದು, ಅದನ್ನು ಪರಿಶೀಲಿಸಲಾಗಿ ಅದರ ಒಳಗೆ 2 ರಟ್ಟಿನ ಪೆಟ್ಟಿಗೆ ಗಳಿದ್ದು, ಪೆಟ್ಟಿಗೆಗಳನ್ನು ತೆರೆದು ನೋಡಲಾಗಿ ಒಂದರಲ್ಲಿ ವಿಂಡ್ಸರ್ ಡಿಲಕ್ಸ್ ವಿಸ್ಕಿ ಎಂದು ಬರೆದ ಲೇಬಲ್ ಅಂಟಿಸಿರುವ 180 ಎಂಎಲ್‌ನ 48 ಮದ್ಯದ ಬಾಟಲಿಗಳು, ಇನ್ನೊಂದರಲ್ಲಿ ಶಾಟ್ ಡಿಲಕ್ಸ್ ವಿಸ್ಕಿ ಲೇಬಲ್ ಅಂಟಿಸಿದ 180 ಎಂಎಲ್‌ನ 48 ಮದ್ಯ ಬಾಟಲಗಳು ಇದ್ದವು, ಆ ವ್ಯಕ್ತಿಗಳ ಹೆಸರು ವಿಚಾರಿಸಲಾಗಿ ಬೈಕ್ ಚಲಾಯಿಸುತ್ತಿದ್ದವ ಹರೀಶ್, ಸಹ ಸವಾರ ಗಂಗಾಧರ ಎಂದು ತಿಳಿದುಬಂದು ಅವರ ವಿಳಾಸವನ್ನು ಕೂಡ ಪಡೆಯಲಾಯಿತು, ತಪಾಸಣೆ ಒಳಪಡಿಸಿದ ಮೋಟಾರ್ ಸೈಕಲ್ ಸಂ: KA-21-J-4714 ಆಗಿದ್ದು, ಅದು ಹಿರೋ ಹೊಂಡಾ ಕಂಪೆನಿಯ ಪ್ಯಾಶನ್ ಮಾಧರಿಯ ಮೋಟಾರ್ ಸೈಕಲ್ ಆಗಿತ್ತು. ಮುಂದಿನ ಕ್ರಮಕ್ಕಾಗಿ ಪಂಚರ ಸಮಕ್ಷಮ ವಾಹನವನ್ನು –ಅಕ್ರಮ ಮದ್ಯವನ್ನು ಸ್ಥಳದಲ್ಲಿ ಒಂದು ವಿವರವಾದ ಮಹಜರು ತಯಾರಿಸಿ ಅಮಾನತುಪಡಿಸಿಕೊಂಡ ಮದ್ಯಕ್ಕೆ ಯಾವುದೇ ಪರವಾನಿಗೆ ಇಲ್ಲದಿದ್ದು, ಅ ಮದ್ಯದ ಬಾಟಲಿಗಳನ್ನು ಅರೋಪಿಗಳು ಅಕ್ರಮವಾಗಿ ಮಾರಾಟ ಮಾಡಲು ಕೊಂಡು ಹೋಗುತ್ತಿರುವುದಾಗಿ ಒಪ್ಪಿದ್ದರು. ರಸಾಯನಿಕ ಪರೀಕ್ಷೆಗಾಗಿ 2 ಪೆಟ್ಟಿಗೆಗಳಿಂದ ತಲಾ 1–1 ಬಾಟಲಿಗಳನ್ನು ಮಾದರಿಗಾಗಿ ತೆಗೆದು ಮುಚ್ಚಳಕ್ಕೆ ಬಿಳಿ ಬಟ್ಟೆ ಸುತ್ತಿ ಎಸ್.ಹೆಚ್.ಒ ಅರಗು ಸೀಲು ಮಾಡಲಾಯಿತು. ಅರೋಪಿಗಳು ಸಾಗಾಟ ಮಾಡಲು ಬಳಿಸಿದ ಗೋಣಿ ಚೀಲವನ್ನು ಅಮಾನತ್ತು ಪಡಿಸದೆವು, ಸ್ಥಳದಲ್ಲಿ ತಯಾರಿಸಿದ ಮಹಜರನ್ನು ನಿ.ಪಿ–6 ಎಂದು, ಅದರ ಮೇಲಿನ ಸಹಿಯನ್ನು ಸಿ.ಪಿ–6 ಎ ಎಂದು ಗುರುತಿಸಲಾಯಿತು. ಮಹಜರಿನಲ್ಲಿ ಪಂಚರಾದ ಯೋಗಾನಂದ ಇವರ ಸಹಿಯನ್ನು ಪಡೆದಿದ್ದೇವೆ, ಸ್ಥಳದಿಂದ ಅರೋಪಿ ಸೊತ್ತುಗಳ ಜೊತೆ ಠಾಣೆಗೆ ಬಂದು ಸರ್ಕಾರದ ಪರವಾಗಿ ವರದಿ ತಯಾರಿಸಿದ್ದು , ಅದು ನಿ.ಪಿ–7 ಎಂದು, ಅದರ ಮೇಲಿನ ಸಹಿಯನ್ನು ನಿ.ಪಿ–7ಎ ಎಂದು , ಸಿ.ಪಿ–7ರ ವರದಿ ಆಧಾರದಲ್ಲಿ ಠಾಣಾ ಅ.ಕ್ರ ಸಂ:71:2010ರಲ್ಲಿ ಪ್ರ.ಮಾ.ವ ತಯಾರಿಸಿ ಮೂಲ ಪ್ರತಿ ಮಾನ್ಯ ನ್ಯಾಯಾಲಯಕ್ಕೂ ,ಪ್ರತಿಯನ್ನು ಇಲಾಖಾ ಮೇಲಾದಿಕಾರಿಗಳಿಗೂ ರವಾನಿಸಿದೆ. ಪ್ರ.ಮಾ.ವ ನೋಡುತ್ತಿದ್ದು ,ನಿ.ಪಿ–8 ರಲ್ಲಿದೆ,ನಿ.8ಎ ತನ್ನ ಸಹಿಯಾಗಿರುತ್ತದೆ, ಅರೋಪಿಗಳನ್ನು

ದಿ:10–9–2010ರಂದು ದಸ್ತಗಿರಿ ಕ್ರಮ ಜರುಗಿಸಿ ರಿಮಾಂಡ್ ವರದಿಯೊಂದಿಗೆ ಮಾನ್ಯ ನ್ಯಾಯಾಲಯಕ್ಕೆ ಕಳುಹಿಸಿರುತ್ತೇನೆ. ಮಾದರಿಗಾಗಿ ತೆಗೆದ ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗೆ ದಿ:23–9–2010ರಂದು ಕಳುಹಿಸಿಕೊಟ್ಟಿರುತ್ತೇನೆ, ಮೊಕದ್ದಮೆಯಲ್ಲಿ ವಶಪಡಿಸಿದ ಸೊತ್ತುಗಳನ್ನು ಮುಟ್ಟುಗೋಲು ವ್ಯವಹರಣೆಗೆ ಅಬಕಾರಿ ಇಲಾಖೆಗೆ ಮಾನ್ಯ ನ್ಯಾಯಾಧೀಶರಿಂದ ಅನುಮತಿ ಪಡೆದು ವರ್ಗಾಯಿಸಿರುತ್ತೇನೆ, ರಸಾಯನಿಕ ತಜ್ಞರ ವರದಿಯು ಬಂದಿದ್ದು, ತನಿಖೆ ಮುಕ್ತಾಯಗೊಳಿಸಿ ಅರೋಪಿ ವಿರುದ್ದ ಕ.ಅ. ಕಾಯ್ದೆ ಕಲಂ 32,34 ರಡಿ ದೋಷಾರೋಪಣಾ ಪಟ್ಟಿ ಸಲ್ಲಿಸಿರುತ್ತೇನೆ ಎಂದು ಸಾಕ್ಷ್ಯ ನುಡಿದಿರುತ್ತಾರೆ.

**ಪ್ರಾ.ಸಾ–3:–**

ಪ್ರಕರಣದ ಇನ್ಸೊರ್ವ ಸಾಕ್ಷಿದಾರರಾದ ಶ್ರೀ. ವೆಂಕಟರಮಣ ಹೆಚ್.ಸಿ, 1131 , ಸುಬ್ರಹ್ಮಣ್ಯ ಪೊ.ಠಾಣೆ ಇವರು ದಿ:8–9–2011ರಂದು ಪ್ರಾದಿಕಾರದ ಮುಂದೆ ಸಾಕ್ಷಿ ನೀಡುತ್ತಾ, ಸುಬ್ರಹ್ಮಣ್ಯ ಠಾಣೆಯಲ್ಲಿ ಕಳೆದ 5 ವರ್ಷಗಳಿಂದ ಮುಖ್ಯ ಅರಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ:9–9–2010ರಂದು ಪಿ.ಸಿ 1255ರೊಂದಿಗೆ ನಿಂತಿಕಲ್ಲು ಚೆಕ್ ಪಾಯಿಂಟ್ ಕರ್ತವ್ಯದಲ್ಲಿದ್ದಾಗ , ರಾತ್ರಿ 10–45 ಗಂಟೆಗೆ ನಮ್ಮ ಠಾಣಾ ಉಪ ನಿರೀಕ್ಷಕರು, ಪಿ.ಸಿ ನಂ:1931 ಹಾಗೂ ಪಂಚರೊಂದಿಗೆ ಇಲಾಖಾ ಜೀಪನಲ್ಲಿ ಠಾಣೆಗೆ ಬಂದರು. ಬೆಳ್ಳಾರೆ ಕಡೆಯಿಂದ ನಿಂತಿಕಲ್ಲು ಕಡೆ ಬೈಕಿನಲ್ಲಿ ಅಕ್ರಮ ಮದ್ಯ ಸಾಗಾಟ ಮಾಡುತ್ತಿದ್ದಾರೆಂದು ಪೋಲೀಸ್ ಉಪ ನಿರೀಕ್ಷಕರು ಹೇಳಿ, ವಾಹನ ತಪಾಸಣೆ ಮಾಡಬೇಕೆಂದು ಹೇಳಿದ ಕಾರಣ ಆ ಕಡೆಯಿಂದ ಬರುವ ವಾಹನ ತಪಾಸಣೆ ಮಾಡುತ್ತಿದ್ದು, ರಾತ್ರಿ KA-21-J-4714 ಮೋಟಾರ್ ಸೈಕಲನ್ನು ಇಬ್ಬರು ಸವಾರಿ ಮಾಡಿ ಬರುತ್ತಿದ್ದು ಅವರನ್ನು ತಡೆದು ನಿಲ್ಲಿಸಿದ್ದು ,ಬೈಕನ್ನು ತಪಾಸಣೆ ಮಾಡಿದಾಗ ಅದರಲ್ಲಿ ಒಂದು ಗೋಣಿಚೀಲದೊಳಗೆ 2 ರಟ್ಟಿನ ಬಾಕ್ಸ್‌ಗಳು ಇದ್ದು, ಅದನ್ನು ತೆರೆದು ನೋಡಿದಾಗ 180 ಎಂಎಲ್‌ನ 48 ಬಾಟಲಿಗಳು ಇದ್ದು, ಒಂದು ಪೆಟ್ಟಿಗೆ ಯಲ್ಲಿ ವಿಂಡ್ಸರ್ ಡಿಲಕ್ಸ್ ವಿಸ್ಕಿ ಮತ್ತೊಂದರಲ್ಲಿ ಶಾಟ್ ಡಿಲಕ್ಸ್ ವಿಸ್ಕಿ ಮದ್ಯ ಬಾಟಲಿಗಳು ಇದ್ದವು, ಪ್ರತಿ ಒಂದು ಬಾಕ್ಸಿನಿಂದ ಮಾದರಿಗಾಗಿ ಒಂದೊಂದು ಬಾಟ್ಲಿ ತೆಗೆದು ಬಿಳಿಬಟ್ಟೆ ಸುತ್ತಿ ದಾರ ಕಟ್ಟಿ ಇಲಾಖಾ ಮೊಹರು ಮಾಡಿದ್ದು, ಪಂಚರ ಸಮಕ್ಷಮ ಮಹಜರು ಮಾಡಿದ್ದು, ಮಹಜರಿಗೆ ಸಹಿ ಮಾಡಿದ್ದು ಮಹಜರನ್ನು ಈಗಾಗಲೇ ನಿ.ಪಿ–1 ಎಂದು ಗುರುತಿಸಲಾಗಿದ್ದು, ನಿ.ಪಿ–1 ಬಿ ಸಹಿ ತನ್ನಾದಾಗಿರುತ್ತದೆ. ಹರೀಶ ರೈ ಎಂಬವರು ಬೈಕ್ ಚಲಾಯಿಸುತ್ತಿದ್ದು, ಗಂಗಾಧರ ಎಂಬವರು ಸಹ ಚಾಲಕರಾಗಿದ್ದರು ಅವರಲ್ಲಿ ಪರವಾನಿಗೆ ಇರಲಿಲ್ಲ ,ಅವರನ್ನು ವಿಚಾರಿಸಿದಾಗ ಅವರು ಅದನ್ನು ಮಾರಾಟ ಮಾಡಲು ಕೊಂಡು ಹೋಗುವುದಾಗಿ ತಿಳಿಸಿದ್ದು, ಅರೋಪಿಗಳನ್ನು ವಶಕ್ಕೆ ತೆಗೆದುಕೊಂಡು ಸ್ಥಳದಿಂದ ನಮ್ಮ ಉಪ ನಿರೀಕ್ಷಕರು ಅವರ ಜತೆ ಬಂದ ಸಿಬ್ಬಂಧಿ ಠಾಣೆಗೆ ಸೊತ್ತು ಸಮೇತ ತೆರಳಿದ್ದು ,ಅರೋಪಿ:ಸೊತ್ತುಗಳನ್ನು ನೋಡಿದರೆ ಗುರುತಿಸಬಲ್ಲೆ ಎಂದು ಸಾಕ್ಷ್ಯ ನುಡಿದಿರುತ್ತಾರೆ.

**<u>ಡಿಡಬ್ಲ್ಯೂ–1</u>**

ಶ್ರೀ.ಹರೀಶ್, ಟಪ್ಪಾಲುಕಟ್ಟೆ ಹೌಸ್, ಮುಪ್ಪೇರೀಯ, ಸುಳ್ಯ ತಾಲೂಕು ಇವರು ರಕ್ಷಣಾ ಪರ ದಿ:17–11–2011ರಂದು ಸಾಕ್ಷ್ಯ ನೀಡುತ್ತಾ, ನಾನು ಪ್ರಕರಣದಲ್ಲಿ ಸ್ವಾಧೀನ ಪಡಿಸಿದ ಕೆಎ–21–ಜೆ–4714 ಬೈಕ್ ಇದರ ಮಾಲೀಕನಾಗಿರುತ್ತೇನೆ. ಕೃಷಿ ಮತ್ತು ಹೈನುಗಾರಿಕೆ ಕೆಲಸ ಮಾಡುತ್ತಿರುತ್ತೇನೆ, ದಿ:10–9–2010ರಂದು ಬೆಳಿಗ್ಗೆ 7–45 ಗಂಟೆಗೆ ಅಲೆಕ್ಕಾಡಿ ಎಂಬಲ್ಲಿನ ಹಾಲು ಡಿಪೋಗೆ ಹಾಲು ಕೊಡಲು ಬಂದಿದ್ದೆ, ಸುಮಾರು 7–45 ರಿಂದ 8–30ರ ತನಕ ಅಲ್ಲೇ ಇದ್ದೆ, ದಿ:10–9–2010ರಂದು ಸುಮಾರು 8–15 ಗಂಟೆಗೆ ಸುಬ್ರಹ್ಮಣ್ಯ ಪೊಲೀಸರಾದ ನಿತ್ಯಾನಂದರವರು ಅಲ್ಲಿಗೆ ಬಂದು ನನ್ನನ್ನು ಬೈಕ್ ಸಮೇತ ಠಾಣೆಗೆ ಬರುವಂತೆ ಹೇಳಿದಾಗ ಯಾವ ಕಾರಣಕ್ಕೆ ಬರಬೇಕೆಂದು ಕೇಳಿದೆನು, ಅಗ ಠಾಣೆಯ ಎಸ್.ಐ ರವರಲ್ಲಿ ಕೇಳುವಂತೆ ಹೇಳಿದರು, ನಂತರ ನಾನು ಮತ್ತು ಸದ್ರಿ ಪೊಲೀಸರು ಬೈಕ್ ಸಮೇತ ಸುಬ್ರಹ್ಮಣ್ಯ ಪೊಲೀಸ್ ಠಾಣೆಗೆ ಹೋದೆವು , ಠಾಣೆಗೆ ಹೋಗುವಾಗ ಸ್ಥಳದಲ್ಲಿದ್ದ ಗಂಗಾಧರ ಗೌಡರನ್ನು ಠಾಣೆಗೆ ಬರುವಂತೆ ಹೇಳಿದೆನು, ಠಾಣೆಗೆ ಹೋದ ಮೇಲೆ ಸಬ್ ಇನ್ಸ್‌ಪೆಕ್ಟರನ್ನು ವಿಚಾರಿಸಿದಾಗ ಅವರು ನೀನು ಬಾರಿ ರಾಜಕೀಯ ಮಾಡುತ್ತಿ ಎಂದು ಹೇಳಿರುತ್ತಾರೆ. ನಂತರ ಮುಂದುವರಿದು ನನ್ನ ಮೇಲೆ ಒಂದು ಕೇಸು ಹಾಕಿರುತ್ತೇನೆಂದು ಹೇಳಿರುತ್ತಾರೆ. ಆ ರೀತಿ ಹೇಳುವಾಗ ಠಾಣೆಯಲ್ಲಿ ಮೇಲೆ ಹೇಳಿದ ಗಂಗಾಧರ ಗೌಡ ಕೂಡ ಇದ್ದರು, ನಂತರ ಠಾಣೆಯಲ್ಲಿ ಎಸ್.ಐ ನನ್ನ ಮೇಲೆ ಸುಳ್ಳು ಕೇಸು ಹಾಕುತ್ತೇನೆಂದು ಹೇಳಿದ್ದಾಗ ಗಂಗಾಧರ ಗೌಡ ಯಾಕೆ ಅವರ ಮೇಲೆ ಸುಳ್ಳು ಕೇಸು ಹಾಕುತ್ತಿರೆಂದು ಕೇಳಿರುತ್ತಾರೆ, ಆಗ ಎಸ್.ಐ ರವರು ನಿನ್ನ ಮೇಲೆ ಸಹ ಕೇಸು ಹಾಕಿದ್ದೇನೆ, ಕೋರ್ಟಿಗೆ ಹೋಗುವ ಎಂದು ಹೇಳಿದರು, ನಂತರ ನನ್ನನ್ನು ಮತ್ತು ಗಂಗಾಧರರವರನ್ನು ಸುಳ್ಯ ನ್ಯಾಯಾಲಯಕ್ಕೆ ಹಾಜರು ಪಡಿಸಿರುತ್ತಾರೆ. ನ್ಯಾಯಾಲಯದಲ್ಲಿ ಪೊಲೀಸರು ನಮ್ಮ ಮೇಲೆ ಅಕ್ರಮ ಮದ್ಯ ಸಾಗಾಟ ಮಾಡಿದ ಕೇಸನ್ನು ಹಾಕಿರುತ್ತಾರೆಂದು ತಿಳಿದು ಬಂತು, ದಿ:9–9–2010 ರಂದು ಪೊಲೀಸರು ನನ್ನನ್ನು ನಿಂತಿಕಲ್ಲು ಜಂಕ್ಷನ್‌ನಲ್ಲಿ ಬೈಕು ತಡೆದು ನಿಲ್ಲಿಸಿರುವುದಿಲ್ಲ, ಕಳೆದ 10 ವರ್ಷದಿಂದ ಕಾಂಗ್ರೆಸ್ ಪಕ್ಷದ ಕಾರ್ಯಕರ್ತನಾಗಿರುತ್ತೇನೆ. ಮೇ –2010 ರಂದು ನಡೆದ ಬಾಳ್ತಿಲ ಗ್ರಾಮ ಪಂಚಾಯತ್‌ಗೆ ಬಾಳ್ತಿಲ,ಮುಪ್ಪೇರೀಯಾ 2 ಗ್ರಾಮಗಳು ಸೇರಿರುತ್ತದೆ. ಮುಪ್ಪೇರೀಯ ಗ್ರಾಮದಲ್ಲಿ 5 ವಾರ್ಡಿದೆ, ಈ 5 ವಾರ್ಡುಗಳಲ್ಲಿಮೇ–2010 ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರು ಜಯಗಳಿಸಿರುತ್ತಾರೆ. ಬಾಳ್ತಿಲ ಗ್ರಾಮದಲ್ಲಿ 5 ವಾರ್ಡಿದ್ದು 3 ವಾರ್ಡಿನಲ್ಲಿ ಕಾಂಗ್ರೆಸ್ ಪಕ್ಷದವರು ಜಯಗಳಿಸಿರುತ್ತಾರೆ. ಮೇ–2010ರ ಚುನಾವಣೆ ನಂತರ ಬಾಳ್ತಿಲ ಗ್ರಾಮದಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರು ಆಡಳಿತ ಮಾಡುತ್ತಿದ್ದಾರೆ,ಅದಕ್ಕಿಂತ ಪೂರ್ವ 15 ವರ್ಷಗಳಿಂದ ಸದ್ರಿ ಗ್ರಾಮದಲ್ಲಿ ಬಿಜೆಪಿ ಬೆಂಬಲಿತ ಸದಸ್ಯರು ಆಡಳಿತ ನಡೆಸುತ್ತಿದ್ದರು, ಬಾಳಿಲ ಗ್ರಾಮ ಪಂಚಾಯತ್‌ನಲ್ಲಿ ಕಾಂಗ್ರೆಸ್ ಸದಸ್ಯರ ಅಡಳಿತ ಬರಲು ನಾನೇ ಕಾರಣ ಎಂಬುದಕ್ಕೆ ಬಿಜೆಪಿಯವರಿಗೆ ನನ್ನ ಮೇಲೆ ವೈಮನಸ್ಸು , ಪೊಲೀಸರು ರಾಜಕೀಯ ಒತ್ತಡಕ್ಕೆ ಮಣಿದು ನನ್ನ ಮೇಲೆ ಸುಳ್ಳು ಕೇಸು ಹಾಕಿರುತ್ತಾರೆ. ಅಲೆಕಾಡಿಯಿಂದ ನಿಂತಕಲ್ಲಿಗೆ ಸುಮಾರು 1ಕಿ.ಮೀ ದೂರ ಇದೆ, ನಿ.ಪಿ–6 ಮಹಜರಿನಲ್ಲಿ ಕಾಣಿಸಿದಂತಹ ಸ್ವತಂತ್ರ ಸಾಕ್ಷಿದಾರ ಯೋಗಾನಂದ, ಅನೂಪ್‌ರವರು ನನ್ನ ವಿರುದ್ದ ಸ್ವರ್ಧಿಸಿದ ಬಿಜೆಪಿ ಸದಸ್ಯ ನವೀನ ರವರ ಸ್ನೇಹಿತರಾಗಿರುತ್ತಾರೆ. ದಿನಾಲೂ ಹಾಲನ್ನು ಬೈಕಿನಲ್ಲಿ ಕೊಂಡು ಹೋಗುತ್ತೇನೆ. ಹೈನುಗಾರಿಕೆ ಮಾಡುವ ಬಗ್ಗೆ ತೋರಿಸುವ ಅಲೆಕ್ಕಾಡಿ ಹಾಲು

ಉತ್ಪಾದಕರ ಸಂಘದವರು ಕೊಟ್ಟಿರುವ ದೃಡ ಪತ್ರದ ನೋಟಿಸಿನ ಕಾಫಿಯನ್ನು ಹಾಜರುಪಡಿಸಿದ್ದು ಅದನ್ನು ನಿ.ಡಿ–1 ಎಂದು ಗುರುತಿಸ ಲಾಯಿತು, ನಿ.ಡಿ–1ರಲ್ಲಿ ಹೇಳಿರುವ ನಾರಾಯಣ ರೈ ರವರು ತನ್ನ ತಂದೆಯಾಗಿರುತ್ತಾರೆ. 2010ರಲ್ಲಿ ನಡೆದ ಗ್ರಾಮ ಪಂಚಾಯತ್ ಚುನಾವಣೆಗೆ ಸ್ಪರ್ಧಿಸಿ ನಾಮ ಪತ್ರ ಸಲ್ಲಿಸಿದ ಬಗ್ಗೆ ದಾಖಲೆ ಹಾಜರು ಪಡಿಸಿದ್ದು, ಅದನ್ನು ನಿ.ಡಿ–2 ಎಂದು , ಮೇಲೆ ಹೇಳಿದ ಕಾರಣದಿಂದ ಈ ಕೇಸಿನಲ್ಲಿ ಸ್ವಾಧೀನ ಪಡಿಸಿದ ಬೈಕನ್ನು ತನಗೆ ಬಿಡುಗಡೆ ಮಾಡಬೇಕೆಂದು ಕೋರುತ್ತೇನೆ .

ಅಭಿಯೋಗದ ಪರ ಸಾಕ್ಷಿ ವಿಚಾರಣೆ ವೇಳೆಯಲ್ಲಿ ಪೊಲೀಸ್ ಅಧಿಕಾರಿಗಳಾದ ಶ್ರೀ.ಸುನೀಲ್ ಎಂ.ಎಸ್ ರವರು ದಿನಾಂಕ: 09–9–2010ರಂದು 10–45 ಗಂಟೆಗೆ ತಮ್ಮ ಸಿಬ್ಬಂಧಿಗಳೊಂದಿಗೆ ಠಾಣೆಯಿಂದ ಹೊರಟು ಮಾಹಿತಿ ಪ್ರದೇಶವಾದ ನಿಂತಿಕಲ್ಲು ಜಂಕ್ಷನ್ ಬಳಿ ಕಾಯುತ್ತಿದ್ದ ಸಂದರ್ಭಧಲ್ಲಿ ಬೆಳ್ಳಾರೆ ಕಡೆಯಿಂದ ಬರುತ್ತಿದ್ದ ವಾಹನ ಸಂ: ಕೆಎ–21–ಜೆ–4714 ಬೈಕ್‌ನ್ನು ತಪಾಸಣೆ ಮಾಡಿದಾಗ ವಾಹನದಲ್ಲಿ ಅಕ್ರಮ ಮದ್ಯ ಸಾಗಾಟ ಪತ್ತೆಯಾಗಿ ಇದು ಅಬಕಾರಿ ಕಾಯಿದೆ ಕಲಂ 11ರ ಪ್ರಕಾರ ಅಪರಾಧ ಹಾಗೂ 32(1) ಮತ್ತು 34 ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ವಾಹನದ ಚಾಲಕ/ ಮಾಲೀಕನಾದ ಹರೀಶ್ ರೈ ಮತ್ತು ಇನ್ನೊರ್ವ ವ್ಯಕ್ತಿ ಗಂಗಾಧರ ಇವರುಗಳ ವಿರುದ್ದ ಕ್ರೈಂ ಸಂ:71/2010 ದಿ:10–09–2010ರ ಪ್ರಕಾರ ಮೊಕದ್ದಮೆ ದಾಖಲಿಸಿಕೊಂಡಿರುವ ಬಗ್ಗೆ ಸ್ಪಷ್ಟವಾಗಿ ಸಾಕ್ಷ್ಯ ನುಡಿದಿರುತ್ತಾರೆ. ಹಾಗೂ ಪ್ರಾ.ಸಾ–3ರವರು ಪ್ರಕರಣ ದಾಖಲಿಸುವ ಸಂದರ್ಭದಲ್ಲಿ ಪ್ರಾ.ಸಾ –2 ರವರೊಡನೆ ಜೊತೆಯಲ್ಲಿದ್ದು ಪಂಚನಾಮೆ ತಯಾರಿಸಿದ ಬಗ್ಗೆ ಸ್ಪಷ್ಟವಾಗಿ ಸಾಕ್ಷಿ ನುಡಿದಿರುತ್ತಾರೆ. ಹಾಗೂ ಪ್ರಕರಣವನ್ನು ಇಲಾಖಾ ಪರ ಹಸ್ತಾಂತರ ಪಡೆದು ಮುಂದಿನ ತನಿಖೆ ಕೈಗೊಂಡು ಜಪ್ತುಪಡಿಸಿಕೊಂಡ ಸೊತ್ತುಗಳನ್ನು ಅಬಕಾರಿ ಕಾಯಿದೆ ಕಲಂ 43 ಎ ರಡಿ ಮುಟ್ಟುಗೋಲು ಹಾಕಿಕೊಳ್ಳಲು ಪ್ರಸ್ತಾವನೆ ಸಲ್ಲಿಸಿರುವ ಬಗ್ಗೆ ಸ್ಪಷ್ಟ ಸಾಕ್ಷ್ಯ ನೀಡಿರುತ್ತಾರೆ. ಹಾಗೂ ಅಭಿಯೋಗದ ಪರ ಅಗತ್ಯ ದಾಖಲಾತಿಗಳನ್ನು ನಿ.ಪಿ.–1 ರಿಂದ ನಿ.ಪಿ–8 ಎ ರವರೆಗೆ ಗುರುತಿಸಿರುತ್ತಾರೆ.

ಎದುರುದಾರರು ತಮ್ಮ ವಾದ ಮಂಡನೆಯ ವೇಳೆಯಲ್ಲಿ ಸಾಕ್ಷಿಗಳು ತದ್ವಿರುದ್ದ ಸಾಕ್ಷಿ ನೀಡಿರುತ್ತಾರೆ,ಸಾಕ್ಷಿಗಳು ಅಡ್ಡ ಸವಾಲಿನಲ್ಲಿ ಹೆಚ್ಚಿನ ವಿಷಯದ ಬಗ್ಗೆ ನೆನಪಿರುವುದಿಲ್ಲ ಎಂದು ನುಡಿ ಸಾಕ್ಷಿ ನೀಡಿರುವುದು, ಪ್ರಕರಣದಲ್ಲಿ ಸ್ವತಂತ್ರ ಸಾಕ್ಷಿದಾರರ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ ಹಾಗೂ ಸೊತ್ತು ಜಪ್ತು ಸಂದರ್ಭದಲ್ಲಿ ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯದೇ ಇರುವುದು/ಸರ್ಚ್ ವಾರೆಂಟನ್ನು ಪಡೆಯಲು ಸಮಯಾವಕಾಶ ವಿಲ್ಲದ ಬಗ್ಗೆ ಕಾರಣಗಳನ್ನು ನಮೂದಿಸಿ ಸರ್ಚ್ ಮೆಮೊ ತಯಾರಿಸದೇ ಇರುವುದರಿಂದ ಮೊಕದ್ದಮೆ ಕ್ರಮಬದ್ದವಾಗಿರದೇ ಸುಳ್ಳು ಪ್ರಕರಣವಾಗಿದ್ದು, ವಾಹನ ಮತ್ತು ಈ ಪ್ರಕರಣಕ್ಕೆ ಯಾವುದೇ ಸಂಬಂಧವಿಲ್ಲವೆಂದು ವಾದಿಸಿ ವಾಹನವನ್ನು ತಮ್ಮ ಕಕ್ಷಿದಾರರಿಗೆ ಬಿಡುಗಡೆ ಗೊಳಿಸುವಂತೆ ವಾದ ಮಂಡಿಸಿರುತ್ತಾರೆ. ಅಭಿಯೋಗ ಕಾನೂನು ಅಧಿಕಾರಿಗಳು ವಾದಿಸುತ್ತಾ ಅಕ್ರಮವಾಗಿ ವಾಹನದಲ್ಲಿ ಮದ್ಯ ಸಾಗಾಟ ಮಾಡುತ್ತಿದುದ್ದನ್ನು ಪತ್ತೆಹಚ್ಚಿದ ಬಗ್ಗೆ, ತನ್ನ ತನಿಖೆಯ ವೇಳೆಯಲ್ಲಿ ವಶಪಡಿಸಿಕೊಂಡ ಸೊತ್ತು ಮದ್ಯವಾಗಿರುವುದು ರಸಾಯನಿಕ ತಜ್ಞರ ವರದಿಯಿಂದ ಸಾಭೀತಾಗಿರುವ ಅಂಶವನ್ನು ವಾದಿಸುತ್ತಾ , ಸದ್ರಿ ವಿಶ್ಲೇಷಣಾ ವರದಿಯನ್ನು ನಿ.ಪಿ–4 ಎಂದು ಗುರುತಿಸಲಾಗಿರುತ್ತದೆ. ವಿಶ್ಲೇಷಣಾ ವರದಿಯಲ್ಲಿ ಮದ್ಯದಲ್ಲಿ ಮದ್ಯಸಾರದ ತೀಕ್ಷಣತೆ 43.0% ಇರುವುದಾಗಿ ರಸಾಯನಿಕ ತಜ್ಞರು ದೃಡೀಕರಣ ನೀಡಿರುತ್ತಾರೆ. ಸದ್ರಿ ರಸಾಯನಿಕ ವಿಶ್ಲೇಷಣಾ ವರದಿಯ ಸಾರಾಂಶದ ಬಗ್ಗೆ ಎದುರುಗಡೆ ವಕೀಲರಾಗಲೀ ಎದುರುದಾರರಾಗಲೀ ಯಾವುದೇ ಅಕ್ಷೇಪಣೆ ಎತ್ತಿರುವುದಿಲ್ಲ. ಮೋಟಾರು ವಾಹನದ ಬಿ ವಹಿಯನ್ನು ಪಡೆದು ಹಾಜರು ಪಡಿಸಿರುವುದಾಗಿ ಸಾಕ್ಷಿ ನುಡಿದಿದ್ದು ಅದನ್ನು ನಿ.ಪಿ–3 ಎಂದು ಗುರುತಿಸಲಾಗಿರುತ್ತದೆ. ಸದ್ರಿ ದಾಖಲೆಯನ್ನು ಪರಿಶೀಲಿಸಿದಾಗ ಅದರಲ್ಲಿ ಎದುರುದಾರರೇ ಅಪರಾಧ ನಡೆದ ದಿನಾಂಕದಂದು ನೊಂದಣಿ ಮಾಲೀಕರಾಗಿರುವುದು ನಿರ್ವಿವಾದದ ಸಂಗತಿಯಾಗಿರುತ್ತದೆ. ಪ್ರಾ.ಸಾ–2ರವರ ನುಡಿಸಾಕ್ಷಿಗೆ ಪೂರಕವಾಗಿ ಪ್ರಾ.ಸಾ–3 ರವರು ಸಾಕ್ಷಿ ನುಡಿದಿರುತ್ತಾರೆ.

ಈ ಪ್ರಕರಣದಲ್ಲಿ ಪ್ರಾಜ್ಞಾ ವಕೀಲರು ಮೇಲೆ ಹೇಳಿದ ಪ್ರಾ.ಸಾ–1ರಿಂದ 3ರ ಸಾಕ್ಷಿಗಳ ಅಡ್ಡ ಸಾಕ್ಷಿ ವಿಚಾರಣೆಯನ್ನು ದೀರ್ಘವಾಗಿ ಮಾಡಿದ್ದು, ಸದ್ರಿ ಸಾಕ್ಷಿಗಳು ನಂಬಲಾರ್ಹವಲ್ಲ ಎಂಬ ಬಗ್ಗೆ ಪೂರಕ ಅಂಶಗಳನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಸರ್ಚ್ ವಾರೆಂಟ್ ಪಡೆಯದೇ ಇದ್ದ ಬಗ್ಗೆ ಎದುರುದಾರರ ವಾದವನ್ನು ಪ್ರಬಲವಾಗಿ ಅಕ್ಷೇಪಿಸಿ ಸರ್ಚ್ ವಾರೆಂಟ್ ಪಡೆಯುವುದು ಅಜ್ಞಾಧಾರಕವಾಗಿರುವುದಿಲ್ಲ ಎಂಬ ಅಂಶವನ್ನು ಪ್ರತಿವಾದಿಸುತ್ತಾ ವಾಹನ ಶೋಧನೆ ಸಂದರ್ಭದಲ್ಲಿ ಕಲಂ 53ರಡಿ ಶೋಧನಾ ವಾರೆಂಟನ್ನು ಪಡೆಯದೇ ಇರುವುದು ಅಭಿಯೋಗದ ವಿಫಲತೆ ಎಂಬುದಾಗಿ ಪರಿಗಣಿಸಲಾಗದು. ಏಕೆಂದರೆ ಕಲಂ 54 ರಡಿ ರೆಕಾರ್ಡ್ ಆಫ್ ರೀಜನ್ಸ್ ನ್ನು ದಾಖಲಿಸದೇ ಇರುವುದು ಕಾನೂನಡಿ ಅಜ್ಞಾಪಕವಾಗಿರುವುದಿಲ್ಲ ಎಂಬುದನ್ನು ಈ ಕೆಳಕಂಡಂತೆ ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪನ್ನು ಆಧರಿಸಿ ವ್ಯಾಖ್ಯಾನಿಸಬೇಕಾಗಿರುತ್ತದೆ.ಶೋಧನಾ ವಾರೆಂಟ್‌ಗಳನ್ನು ಪಡೆಯಲು ವಿಫಲರಾದ ಬಗ್ಗೆ ಕಾರಣಗಳನ್ನು ದಾಖಲಿಸದೇ ಇರುವುದು ಕೇವಲ ಕಾನೂನಿನ ಪ್ರಕ್ರಿಯೆಯಲ್ಲಿ ಒಂದು ಅನಿಯಮತೆಯಾಗಿದ್ದು ಕೇವಲ ಅದೇ ಒಂದು ಕಾರಣದಡಿ ಇಡೀ ಶೋಧನೆಯನ್ನು ಅಥವಾ ಮುಟ್ಟುಗೋಲು ವ್ಯವಹರಣೆಯನ್ನು ಅಥವಾ ಪ್ರಾದಿಕಾರವು ಮಾಡಿದ ಅಂತಿಮ ಮುಟ್ಟುಗೋಲು ಅದೇಶವನ್ನು ಕಾನೂನಿನಡಿ ಅಸಿಂಧುವೆಂದು ಘೋಷಿಸಲು ಬರುವುದಿಲ್ಲ. ಶೋಧನೆಯನ್ನು ಮಾಡುವ ಮೊದಲು ವಾರೆಂಟ್ ಪಡೆದು ಕೊಳ್ಳದೇ ಇರುವ ಬಗ್ಗೆ ಅಥವಾ ವಾರೆಂಟ್ ಪಡೆಯಲು ವಿಫಲರಾದ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳು ಕಾರಣಗಳನ್ನು ದಾಖಲಿಸದೇ ಇರುವುದು ಆರೋಪಿಯ ಹಕ್ಕಿಗೆ ಅಥವಾ ಆತನ ಹಿತಾಸಕ್ತಿಗೆ ದಕ್ಕೆಯನ್ನು ಉಂಟು ಮಾಡುತ್ತದೆ ಎಂಬುದಾಗಿ ಆರೋಪಿ ತೋರಿಸಿ ಕೊಡಬೇಕಾಗುತ್ತದೆ. ಶೋಧನಾ ವಾರೆಂಟನ್ನು ಪಡೆಯಲೇ ಬೇಕು ಎಂಬುದು ಖಡ್ಡಾಯವಾಗಿರುವುದಿಲ್ಲ ಅಥವಾ ಅಜ್ಞಾಪಕವಾಗಿರುವುದಿಲ್ಲ. ಶೋಧನಾ ವಾರೆಂಟನ್ನು ಪಡೆದುಕೊಳ್ಳಲು ವಿಫಲರಾದ ಬಗ್ಗೆ ಕಾರಣಗಳನ್ನು ನಮೂದಿಸದೇ ಇರುವುದು ಇಡೀ ಶೋಧನೆ ಮತ್ತು ಅದರ ನಂತರದ ಮುಟ್ಟುಗೋಲು ವ್ಯವಹರಣೆಯನ್ನು ಅಥವಾ ಅಂತಿಮ ಮುಟ್ಟುಗೋಲು ಅದೇಶ ಅಸಿಂಧುಗೊಳಿಸುವುದಿಲ್ಲ. ಈ ರೀತಿ ಅಸಿಂಧುಗೊಳಿಸಿದರೇ ಹಾಡುಹಗಲೇ ಅಥವಾ ಕಣ್ಣೆದುರೇ ಅಕ್ರಮ ಮದ್ಯ ಸಮೇತ ಪ್ರಕರಣದ ಅಪರಾಧಿ ಗಳನ್ನು ಕೈಚೆಲ್ಲ ಬೇಕಾಗುತ್ತದೆ ಕಾನೂನನ್ನು

ಅಪರಾಧಿಗಳಿಗೆ ಸಹಾಯವಾಗುವ ರೀತಿಯಲ್ಲಿ ಅರ್ಥ ಮಾಡಿಕೊಂಡಲ್ಲಿ ಇನ್ನೂ ಹೆಚ್ಚಿನ ಅಪರಾಧಗಳು ಆಗುವ ಸಂಭಾವ್ಯತೆಗಳು ಜಾಸ್ತಿ. ಆದುದರಿಂದ ಕರ್ನಾಟಕ ಅಬಕಾರಿ ಕಾಯಿದೆ ಕಲಂ 54 ರ ಹಿಂದಿನ ಉದ್ದೇಶವನ್ನು ಅರಿತು ವ್ಯಾಖ್ಯಾನಿಸಬೇಕಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಗೌರವಾನ್ವಿತ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠ ನೀಡಿದ ತೀರ್ಪು ಸಂ: ILR: 2004: KAR:536 ರ ಪುಟ ಸಂ:527ರಲ್ಲಿ ವಿವರವಾಗಿ ಪ್ರಸ್ತಾವಿಸಲಾಗಿದೆ.

ಎದುರುದಾರ ವಕೀಲರು ತಮ್ಮ ವಾದ ಮಂಡನೆಯ ವೇಳೆಯಲ್ಲಿ ಸ್ವತಂತ್ರ ಸಾಕ್ಷಿಗಳನ್ನು ವಿಚಾರಣೆಗೆ ಹಾಜರುಪಡಿಸಿರುವುದಿಲ್ಲ ಎಂದು ವಾದಿಸಿದ್ದರೂ ಪ್ರಕರಣದಲ್ಲಿ ಸ್ವತಂತ್ರ ಸಾಕ್ಷಿಗಳ ಹೇಳಿಕೆಗಳನ್ನು ಸಿಂಧು ಎಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ಪ್ರಾಸಾ–2 ಮತ್ತು 3 ರವರು ಗಸ್ತಿನಲ್ಲಿದ್ದ ಅಧಿಕಾರಿಗಳಾಗಿದ್ದು ಖಚಿತ ಮಾಹಿತಿ ಮೇರೆಗೆ ಅವರ ಕರ್ತವ್ಯ ವೇಳೆಯಲ್ಲಿ ಈ ಪ್ರಕರಣದ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆ ಮಾಡುತ್ತಿರುವ ಸಂದರ್ಭದಲ್ಲಿ ವಶಪಡಿಸಿಕೊಂಡಿರುವುದು ದೃಢವಾಗುತ್ತಿದ್ದು ಸ್ವತಂತ್ರ ಸಾಕ್ಷಿಗಳ ಸಾಕ್ಷ್ಯ ಇಲ್ಲದೇ ಹೋದಾಗ್ಯೂ ಗಸ್ತಿನಲ್ಲಿದ್ದ ಅದಿಕಾರಿ ಹಾಗೂ ಸಿಬ್ಬಂಧಿಗಳ ಸಾಕ್ಷವನ್ನೇ ನಂಬಿ ಮಾನ್ಯ ಸರ್ವೋಚ್ಚ ನ್ಯಾಯಾಲಯ 1996 ಸುಪ್ರಿಂ ಕೋರ್ಟ್ ಕೇಸಸ್ (ಕ್ರಿಮಿನಲ್) 113 ರ ಭಾಗ–ಡಿಯಲ್ಲಿ ಸಾರಿರುವುದನ್ನು ಪರಿಗಣಿಸಿದಾಗ ಪ್ರಾಜ್ಞಾ ವಕೀಲರ ವಾದವನ್ನು ತಳ್ಳಿಹಾಕ ಬಹುದಾಗಿರುತ್ತದೆ.

ಪ್ರಕರಣವು ಯಾವುದೇ ಕ್ರಿಮಿನಲ್ ಪ್ರಕರಣವಾಗಿರದೇ ,ಮುಟ್ಟುಗೋಲು ನಡವಳಿಯಾಗಿರುವುದರಿಂದ ಅಭಿಯೋಗದ ಪರ ವಿಚಾರಿಸಲಾದ ಇಲಾಖಾ ಸಾಕ್ಷಿಗಳ ಸಾಕ್ಷ್ಯದಲ್ಲಿ ಕೆಲವೊಂದು ಸಣ್ಣಪುಟ್ಟ ವ್ಯತಿರೀಕ್ತತೆಗಳು ಕಂಡುಬಂದರೂ ಅದು ಅಭಿಯೋಜನೆಗೆ ಮಾರಕವಾಗುವುದಿಲ್ಲ ಹಾಗೂ ವ್ಯತಿರೀಕ್ತತೆಗಳು ಸಾಕ್ಷಿಗಳ ಸಾಕ್ಷ್ಯದಲ್ಲಿ ಸರ್ವೆ ಸಾಮಾನ್ಯವಾಗಿರುತ್ತದೆ. ಭಾರತೀಯ ಸಾಕ್ಷ್ಯ ಅಧಿನಿಯಮ ಕಲಂ 3ರಡಿ ಮೌಖಿಕ ಸಾಕ್ಷ್ಯವನ್ನು ವಿಚಾರಣೆ ಮಾಡಿದಾಗ ಸಾಕ್ಷ್ಯವು ಗುಣಾತ್ಮಕವಾಗಿರಬೇಕೇ ಹೊರತು ಸಾಕ್ಷ್ಯದ ಒಟ್ಟು ಪ್ರಮಾಣವನ್ನು ಗಣನೆಗೆ ತೆಗೆದು ಕೊಳ್ಳಲಾರದು. ಯಾವುದೇ ಒಂದು ಸಂಗತಿಯನ್ನು ಕಾನೂನಡಿ ಸಾಬೀತುಪಡಿಸಬೇಕಾದರೆ ಒಂದು ನಿರ್ಧಿಷ್ಟ ಪ್ರಮಾಣದ ಸಾಕ್ಷಿಗಳು ಬೇಕು ಎಂಬಂತೆ ಕಾನೂನು ಅಂಶ ಇರುವುದಿಲ್ಲ. ಈ ಕಾನೂನಿನ ಅಂಶವನ್ನು ಭಾರತೀಯ ಸಾಕ್ಷ್ಯ ಅಧಿನಿಯಮದ ಕಲಂ 134ರಡಿ ಸ್ಪಷ್ಟ ಪಡಿಸಲಾಗಿರುವುದು.ಅಭಿಯೋಗದ ಪರ ವಿಚಾರಿಸಲಾದ ಇಲಾಖಾ ಸಾಕ್ಷಿಗಳು ಪ್ರಕರಣವನ್ನು ಪತ್ತೆಹಚ್ಚಿ ಮುಂದಿನ ತನಿಖೆ ನಡೆಸಿ ಅರೋಪಿ /ವಾಹನದ ಮಾಲೀಕರು ತನ್ನ ವಾಹನವನ್ನು ಈ ಕೃತ್ಯದಲ್ಲಿ ನಿಯೋಜಿಸಿರುವುದು ಅಕ್ರಮವಾಗಿದ್ದು ಯಾವುದೇ ಮುಂಜಾಗತ್ರೆಯನ್ನು ತೆಗೆದುಕೊಳ್ಳದೇ ಇರುವುದು ಸಾಭೀತಾಗಿರುತ್ತದೆ. ಈ ಬಗ್ಗೆ ಇಲಾಖಾ ಸಾಕ್ಷಿಗಳು ಬಹಳ ಸ್ಪಷ್ಟವಾಗಿ ಹಾಗೂ ತಮ್ಮ ಕರ್ತವ್ಯದ ನೆಲೆಯಲ್ಲಿ ಪ್ರಮಾಣಿಕವಾಗಿ ಸಾಕ್ಷ್ಯ ನೀಡಿರುವುದರಿಂದ ಸ್ವತಂತ್ರ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಲಾಗಿಲ್ಲ ಎಂಬ ಅಂಶ ಯಾವುದೇ ರೀತಿಯಲ್ಲಿ ಮುಟ್ಟುಗೋಲು ಪ್ರಕ್ರಿಯೆಗೆ ಮಾರಕವಾಗುವುದಿಲ್ಲ. ವಾಹನದಲ್ಲಿ ತನ್ನ ತಿಳುವಳಿಕೆಗೆ ಬಾರದೇ ಮದ್ಯ ಸಾಗಾಟವಾಗಿರುವುದು ಎಂಬ ಆಂಶವನ್ನು ವಾಹನದ ಮಾಲೀಕರು ಸ್ಪಷ್ಟ ಪಡಿಸದೇ ಇರುವುದು ಹಾಗೂ ಪ್ರಕರಣವನ್ನು ಪೊಲೀಸರು ರಾಜಕೀಯ ಒತ್ತಡಕ್ಕೆ ಮಣಿದು ಉದ್ದೇಶ ಪೂರ್ವಕವಾಗಿ ದಾಖಲಿಸಿಕೊಂಡಿರುವುದು ಎಂದು ರಕ್ಷಣಾ ಹೇಳಿಕೆಗಳನ್ನು ನೀಡಿರುವ– ರಾದರೂ ಈ ಬಗ್ಗೆ ಪುರಾವೆಗಳನ್ನು ಒದಗಿಸಿ ರುಜುವಾತು ಪಡಿಸಲು ವಿಫಲರಾಗಿರುತ್ತಾರೆ. ಕಾರಣ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ತಮ್ಮ ಪ್ರತಿವಾದವನ್ನು ಅಭಿಯೋಗದ ಪರ ಮಂಡಿಸಿರುತ್ತಾರೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ತನ್ನ ತೀರ್ಪಿನಲ್ಲಿ ಅಪರಾಧಿಗೆ ಶಿಕ್ಷೆಯನ್ನು ವಿಧಿಸಬಹುದು ಎಂದು ಸಾರಿದ್ದು ಆದರೆ ಈ ಪ್ರಾದಿಕಾರದ ಮುಂದೆ ಇರುವ ಪ್ರಕರಣವು ವಾಹನದ ಮುಟ್ಟುಗೋಲು ಪ್ರಕ್ರಿಯೆಗೆ ಸಂಬಂಧಪಟ್ಟಿದ್ದು ಸಂಭವನೀಯ ಸಾಕ್ಷಾಧಾರಗಳು ಸಾಕಾಗುತ್ತದೆ. ಮಾನ್ಯ ಸರ್ವೋಚ್ಚ ನ್ಯಾಯಾಲಯವು 2006 ಎಸ್ಎಆರ್ (ಕ್ರಿಮಿನಲ್) ಪುಟ ಸಂ: 768ರಲ್ಲಿ ಅಬಕಾರಿ ಪ್ರಕರಣಗಳಲ್ಲಿ Presumption Clouses ಗಳು ಇರುವುದರಿಂದ ಅನ್ಯಥಾ ಎದುರುದಾರರು ದೃಢಪಡಿಸುವವರೆಗೆ ಅಭಿಯೋಜನಾ ವ್ಯವಹಣೆಗಳನ್ನು ನಂಬಬಹುದು ಎಂದು ಸಾರಿರುವುದನ್ನು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯದ ಐಎಲ್ಆರ್–2001 ಕರ್ನಾಟಕ 4655 ರ ತೀರ್ಪಿನಲ್ಲಿ **ಪಂಚರ ಸಾಕ್ಷ್ಯಗಳು ಪರಿಗಣಿತವಾಗದಿದ್ದರೂ ತನಿಖಾಧಿಕಾರಿಗಳ ಸಾಕ್ಷ್ಯ ಒಂದೇ ಸಾಕಾಗುತ್ತದೆ ಎಂದು ಸಾರಿರುವುದನ್ನು ಸಹಾ ಪರಿಗಣಿಸಲಾಗಿರುತ್ತದೆ.**

ಎದುರುದಾರರ ಕಡೆ ಪ್ರತಿವಾದಿ ಸಾಕ್ಷಿ 1–ಹರೀಶ್ ,ಬಿನ್:ನಾರಾಯಣ ರೈ ಇವರು ವಿಚಾರಣೆ ಸಂದರ್ಭದಲ್ಲಿ ರಾಜಕೀಯ ಪ್ರೇರಿತರಾಗಿ ತನ್ನ ಮೇಲೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ ಎಂದು ತಿಳಿಸಿ ಸರ್ಕಾರಿ ವಕೀಲರ ಅಡ್ಡ ವಿಚಾರಣೆಗೆ ಸಮಗ್ರವಾಗಿ ಅಕ್ಷೇಪಣೆ ವ್ಯಕ್ತಪಡಿಸಿರುವರಾದರೂ ಸೂಕ್ತ ಪುರಾವೆಗಳನ್ನು ನೀಡಲು ವಿಫಲರಾಗಿರುವುದರಿಂದ ಸದ್ರಿ ಸಾಕ್ಷಿಯವರು ವಾಹನವನ್ನು ಈ ಪ್ರಕರಣದಿಂದ ಮುಕ್ತಗೊಳಿಸುವ ಇರಾದೆಯಿಂದ ಸುಳ್ಳು ಸಾಕ್ಷ್ಯ ಸೃಷ್ಟಿ ಮಾಡಿರುವುದು ದೃಢಪಟ್ಟಿರುತ್ತದೆ.

ಈ ಪ್ರಕರಣದಲ್ಲಿ ಅಕ್ರಮವಾಗಿ ವಾಹನದಲ್ಲಿ ಮದ್ಯ ಸಾಗಾಟ ಮಾಡಿರುವುದನ್ನು ಪತ್ತೆಹಚ್ಚಿದ ಪ್ರಾ.ಸಾ–2 ಮತ್ತು ಅವರ ಸಿಬಂಧಿಗಳು ಮಾದರಿಗಾಗಿ ಸದ್ರಿ ದೊರೆತ ಮದ್ಯದಲ್ಲಿ ಸ್ವಲ್ಪ ಪ್ರಮಾಣದಲ್ಲಿ ತೆಗೆದಿರುವುದು ಕಂಡುಬಂದಿದ್ದು ಆ ಬಗ್ಗೆ ಎದುರುದಾರರು/ಪ್ರಾಜ್ಞಾ ವಕೀಲರು ಯಾವುದೇ ರೀತಿ ಅಲ್ಲಗಳೆದು ವಾದ ಮಂಡಿಸದೇ ಇರುವುದರಿಂದ ಅಕ್ರಮವಾಗಿ ಮದ್ಯ ಸಾಗಾಟ ಮಾಡಿರುವುದು ಅಪರಾಧವಾದ ಹಿನ್ನಲೆಯಲ್ಲಿ ಮಾದರಿ ತೆಗದಿರುವುದು ಸ್ವಲ್ಪಾಂಶವಾದರೂ ಸಹ ಸಕಾರತ್ಮಕವಾಗಿರುತ್ತದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಅಭಿಯೋಗದ ಪರ ಸಾಕ್ಷಿಗಳ ಹಾಗೂ ರಕ್ಷಣಾ ಸಾಕ್ಷಿಗಳ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಮೋಟಾರ್ ಸೈಕಲ್ ಸಂ: KA-21-J-4714 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನಡೆಸಲಾದ ವಿಚಾರಣೆಯಲ್ಲಿ ಯೋಗ್ಯವಾಗಿರುವುದೆಂದು ಪ್ರಾದಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಮೋಟಾರ್ ಸೈಕಲ್ ಸಂ: KA–21–J–4714ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ,ನಿಯಮ 43 ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಸುಬ್ರಹ್ಮಣ್ಯ ಪೊಲೀಸ್ ಠಾಣೆ ಇವರ ತಕ್ಷೀರು ಸಂ:71/2010,ದಿ:10–9–2010ರಲ್ಲಿ ಜಪ್ತುಪಡಿಸಿರುವ ಮೋಟಾರ್ ಸೈಕಲ್ ಸಂ: KA-21-J-4714 (ಚಾಸೀಸ್ ಸಂ: 06B09C52830 ಮತ್ತು ಇಂಜಿನ್ ಸಂ: 06B08M43473) ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 43 ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಪ್ರಾಧಿಕಾರದಿಂದ ದಿ:27-1-2011 ರಂದು ವಾಹನ ಮೋಟಾರ್ ಸೈಕಲ್ ಸ : KA-21-J-4714 ನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಮೋಟಾರ್ ಸೈಕಲ್ ಸ : KA-21-J-4714 ನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು,ಸುಳ್ಯ ವಲಯ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ ವಿಜಯ ಬ್ಯಾಂಕ್, ಬೆಳ್ಳಾರೆ ಶಾಖೆ, ಸುಳ್ಯ ಇಲ್ಲಿಂದ ಬ್ಯಾಂಕ್ ಗ್ಯಾರಂಟಿ ಸಂಖ್ಯೆ: 10261BG1S110002 ದಿ:10–2–2011ರಲ್ಲಿ ಅಡಕವಾದ ಮೊತ್ತ ರೂ.15,000/–ನ್ನು ಸರ್ಕಾರದ ಖಾತೆಗೆ ಜಮೆ ಮಾಡಿಕೊಳ್ಳಲು ಅದೇಶಿಸಿದೆ. ಆ ಆದೇಶದ ಪಾಲನೆ ಬಗ್ಗೆ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರು ಸೂಕ್ತ ಕ್ರಮ ಜರುಗಿಸಿ ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಪ್ರಕರಣದಲ್ಲಿ ಜಪ್ತು ಪಡಿಸಿಕೊಳ್ಳಲಾದ ಮದ್ಯವನ್ನು ಈ ಪ್ರಾಧಿಕಾರದ ಸಮ ಸಂಖ್ಯೆ ಅದೇಶ ದಿನಾಂಕ:4–2–2011ರ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡಿರುವುದನ್ನು ಸ್ಥಿರೀಕರಿಸಿದ್ದೇನೆ.

ಈ ಆದೇಶವನ್ನು ದಿ:26–04–2012ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ಬಿ.ವಿ ಹೂವಪ್ಪ ಗೌಡ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ–I : ಶ್ರೀ.ಶಿವಪ್ರಸಾದ್,ಅ.ನಿ (ಪ್ರಬಾರ) , ಸುಳ್ಯ ವಲಯ
ಪ್ರಾ.ಸಾ–2 : ಶ್ರೀ.ಸುನಿಲ್ ಎಂ.ಎಸ್, ಪೊ.ಉ.ನಿ ಸುಬ್ರಹ್ಮಣ್ಯ ಪೊ.ಠಾಣೆ
ಪ್ರಾ.ಸಾ–3 : ಶ್ರೀ. ವೆಂಕಟರಮಣ ಹೆಚ್.ಸಿ, 1131 , ಸುಬ್ರಹ್ಮಣ್ಯ ಪೊ.ಠಾಣೆ

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು**

| | | |
|---|---|---|
| ನಿಶಾನೆ ಪಿ–I | : | ಅಧಿಕೃತ ಅದಿಕಾರಿಗಳಿಗೆ ತನಿಖಾಕಾರಿಗಳು ಸಲ್ಲಿಸಿದ ವರದಿ |
| ನಿಶಾನೆ ಪಿ–Iಎ | : | ಸಾಕ್ಷಿ ಸಹಿ |
| ನಿಶಾನೆ ಪಿ–2 | : | ಮೌಲ್ಯ ಮಾಪನ ವರದಿ |
| ನಿಶಾನೆ ಪಿ–3 | : | ಬಿ ಎಕ್ಸ್‌ಟ್ರಾಕ್ಟ್ ವರದಿ , |
| ನಿಶಾನೆ ಪಿ–4 | : | ರಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ–5 | : | ಮದ್ಯಂತರ ಅದೇಶದ ಬಗ್ಗೆ ತನಿಖಾಧಿಕಾರಿಗಳ ಅಕ್ಷೇಪಣೆ |
| ನಿಶಾನೆ ಪಿ–6 | : | ತನಿಖಾ ವರದಿ |
| ನಿ.ಪಿ–7 | : | ಮಹಜರು , ನಿ.ಪಿ–7 ಎ ಅದರ ಮೇಲಿನ ಸಾಕ್ಷಿ ಸಹಿ |
| ನಿಶಾನೆ ಪಿ–8 | : | ಪ್ರಥಮ ಮಾಹಿತಿ ವರದಿ, ನಿ.ಪಿ–8 ಎ ಅದರ ಮೇಲಿನ ಸಾಕ್ಷಿ ಸಹಿ |

**ಅನುಬಂಧ–III**

**ರಕ್ಷಣಾ ಪರ ವಿಚಾರಣೆ ಮಾಡಲಾದ ಸಾಕ್ಷಿದಾರರು**

ಡಿಡಬ್ಲ್ಯೂ–ಡಿ–1 : ಶ್ರೀ.ಹರೀಶ್ ,ಟಪ್ಪಾಲುಕಟ್ಟೆ ಹೌಸ್, ಮುಪ್ಪೇರೀಯ, ಸುಳ್ಯ ತಾಲೂಕು (ವಾಹನದ ಮಾಲೀಕ)

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :–**

ಡಿ–1 : ಮುರುಳ್ಯ ಹಾಲು ಉತ್ಪಾದಕರ ಸಹಕಾರಿ ಸಂಘ ನಿಯಮಿತ ,ಅಲೆಕ್ಕಾಡಿ ಸುಳ್ಯ ಇವರ ದೃಢೀಕರಣ ಪತ್ರ ದಿ:1–11–2011.

ಡಿ–2 : ಗ್ರಾಮ ಪಂಚಾಯತ್ ಚುನಾವಣೆಗೆ ಸಲ್ಲಿಸಿದ್ದ ನಾಮ ಪತ್ರದ ಪ್ರಪತ್ರ

**ಬಿ.ವಿ ಹೂವಪ್ಪ ಗೌಡ**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,

ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿ.ಆರ್. 675**

**ಕಾರ್ಮಿಕ ಇಲಾಖೆ**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–22/2012 ದಿನಾಂಕ:2–5–2012**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1. ಸಪುರಾ ಬಾಯಿ ಕೋಂ ಬುಡೇನ್ ಸಾಬ್<br>40 ವರ್ಷಗಳು.<br>2. ನೂರ್‌ಜಾನ್ ತಂದೆ ಬುಡೇನ್ ಸಾಬ್<br>22 ವರ್ಷ<br>ವಿಳಾಸ:– ಮಲೇಬೆನ್ನೂರು ಗ್ರಾಮ<br>ಹರಿಹರ ತಾಲ್ಲೂಕ್ ದಾವಣಗೆರೆ ಜಿಲ್ಲೆ. | 1. ಬಿ.ಪಂಚಪ್ಪ ಬಿನ್ ಲೇಟ್ ಬಿ ಪುಟ್ಟಪ್ಪ<br>ಲಾರಿ ಮಾಲೀಕರು, ನಂ.ಕೆಎ–17/ಬಿ–1449<br>ಚನ್ನೇಶ್ವರ ರೈಸ್ ಮಿಲ್ ಮಾಲೀಕರು,<br>ಮಲೇಬೆನ್ನೂರು ಗ್ರಾಮ,ಹರಿಹರ ತಾಲ್ಲೂಕ್, ದಾವಣಗೆರೆ ಜಿಲ್ಲೆ.<br>2. ದಿ ಡಿವಿಜನಲ್ ಮೇನೇಜರ್,<br>ಡಿವಿಜನಲ್ ಆಫೀಸ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ. ದಾವಣಗೆರೆ. |

**ಪ್ರಕಟಣೆ**

ಶ್ರೀ:ಶ್ರೀಮತಿ ಸಪುರಾ ಬಾಯಿ ಕೋಂ ಬುಡೇನ್ ಸಾಬ್ ಮತ್ತು ನೂರ್‌ಜಾನ್ ತಂದೆ ಬುಡೇನ್ ಸಾಬ್ ಇವರುಗಳಾದ ನಾವು ಮೃತ ರೆಹಮತುಲ್ಲಾ ಬಿನ್ ಬುಡೇನ್ ಸಾಬ್ ಇವರ ತಾಯಿ ಹಾಗೂ ಸಹೋದರಿ ಎಂದೂ ನಾವು ಮೃತ ರೆಹಮತುಲ್ಲಾ ಬಿನ್ ಬುಡೇನ್ ಸಾಬ್ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ರೆಹಮತುಲ್ಲಾ ಬಿನ್ ಬುಡೇನ್ ಸಾಬ್ ಒಂದನೇ ಪ್ರತಿವಾದಿಗಳಾದ ಬಿ.ಪಂಚಪ್ಪ ಬಿನ್ ಲೇಟ್ ಬಿ ಪುಟ್ಟಪ್ಪ ವಾಹನದಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್**

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ

ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಕಾರ್ಮಿಕ ಇಲಾಖೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–23/2012 ದಿನಾಂಕ:2–5–2012**

**ಅರ್ಜಿದಾರರು**

1. ಶಾಂತಮ್ಮ ಕೋಂ ಲೇಟ್ ಮಂಜುನಾಥ್ @ ಮಂಜಪ್ಪ 35 ವರ್ಷಗಳು.
2. ಕು॥ಅಕ್ಷತಾ ತಂದೆ ಲೇಟ್ ಮಂಜುನಾಥ್ @ ಮಂಜಪ್ಪ 8 ವರ್ಷಗಳು.
3.ಮಾ॥ ಕಾರ್ತಿಕ್ ತಂದೆ ಲೇಟ್ ಮಂಜುನಾಥ್ @ ಮಂಜಪ್ಪ 01 ವರ್ಷ
ವಿಳಾಸ:– ಕೊಮಾರನಹಳ್ಳಿ ಗ್ರಾಮ, ಹರಿಹರ ತಾಲ್ಲೂಕ್ ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು**

1. ಬಿ.ಪಂಚಪ್ಪ ಬಿನ್ ಲೇಟ್ ಬಿ ಪುಟ್ಟಪ್ಪ, ಲಾರಿ ಮಾಲೀಕರು, ನಂ.ಕೆಎ–17/ಬಿ–1449 ಚನ್ನೇಶ್ವರ ರೈಸ್ ಮಿಲ್ ಮಾಲೀಕರು, ಮಲೇಬೆನ್ನೂರು ಗ್ರಾಮ,ಹರಿಹರ ತಾಲ್ಲೂಕ್, ದಾವಣಗೆರೆ ಜಿಲ್ಲೆ.
2. ದಿ ಡಿವಿಜನಲ್ ಮೇನೇಜರ್, ಡಿವಿಜನಲ್ ಆಫೀಸ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ. ದಾವಣಗೆರೆ.

**:: ಪ್ರಕಟಣೆ ::**

ಶ್ರೀ:ಶ್ರೀಮತಿ ಶಾಂತಮ್ಮ ಕೋಂ ಲೇಟ್ ಮಂಜುನಾಥ್ ಬಿನ್ ಮಂಜಪ್ಪ, ಕು॥ಅಕ್ಷತಾ ತಂದೆ ಲೇಟ್ ಮಂಜುನಾಥ್ ಬಿನ್ ಮಂಜಪ್ಪ, ಮಾ॥ ಕಾರ್ತಿಕ್ ತಂದೆ ಲೇಟ್ ಮಂಜುನಾಥ್ ಬಿನ್ ಮಂಜಪ್ಪ ಇವರುಗಳಾದ ನಾವು ಮೃತ ಮಂಜುನಾಥ್ @ ಮಂಜಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ಮಂಜುನಾಥ್ @ ಮಂಜಪ್ಪ ಒಂದನೇ ಪ್ರತಿವಾದಿಗಳಾದ ಬಿ.ಪಂಚಪ್ಪ ಬಇನ್ ಲೇಟ್ ಬಿ ಪುಟ್ಟಪ್ಪರವರ ವಾಹನದಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ
ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪಿ.ಆರ್. 659**

## ಕಾರ್ಮಿಕ ಇಲಾಖೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–28/2012 ದಿನಾಂಕ:2–5–2012**

**ಅರ್ಜಿದಾರರು**

1. ಚನ್ನಬಸಪ್ಪ ಬಿನ್ ಚನ್ನವೀರಪ್ಪ
55 ವರ್ಷಗಳು.
2. ರತ್ನಮ್ಮ ಕೋಂ ಚನ್ನಬಸಪ್ಪ
45 ವರ್ಷ
ವಿಳಾಸ:– ಬಸವೇಶ್ವರ ದೇವಸ್ಥಾನದ ಹತ್ತಿರ,
ಹೊಸ ಕುಂದವಾಡ ಗ್ರಾಮ
ದಾವಣಗೆರೆ ತಾಲ್ಲೂಕ್ ಮತ್ತು ಜಿಲ್ಲೆ.

**ಪ್ರತಿವಾದಿಗಳು**

1. ವಿ.ರಾಜಶೇಖರನ್ ಬಿನ್ ವೇಲುಸ್ವಾಮಿ
ಲಾರಿ ಮಾಲೀಕರು, ನಂ.ಕೆಎ–21/ಎ–695
ನಂ.1042, ಬಿ.ಎಂ.ಎಂ. ಕೃಪಾ ತಿಂಕಿಲಾ ಬೋಲವಾರ್,
ಓ. ಪುತ್ತೂರು ಹೆಚ್.ಓ ದಕ್ಷಿಣ ಕನ್ನಡ, ಕರ್ನಾಟಕ.
2. ದಿ ಮೇನೇಜರ್,
ಐ.ಸಿ.ಐ.ಸಿ. ಲಂಬಾರ್ಡ್ ಜನರಲ್ ಇನ್ಸೂರೆನ್ಸ್ ಕಂ.ಲಿ.
ಬ್ರಾಂಚ್ ಆಫೀಸ್, ದಾವಣಗೆರೆ.

**:: ಪ್ರಕಟಣೆ ::**

ಶ್ರೀ:ಶ್ರೀಮತಿ ಚನ್ನಬಸಪ್ಪ ಬಿನ್ ಚನ್ನವೀರಪ್ಪ ಮತ್ತು ರತ್ನಮ್ಮ ಕೋಂ ಚನ್ನಬಸಪ್ಪ ಇವರುಗಳಾದ ನಾವು ಮೃತ ಕೆ.ಸಿ.ನಾಗರಾಜ್ ಇವರ ತಂದೆ–ತಾಯಿ ಎಂದೂ ನಾವು ಮೃತ ಕೆ.ಸಿ.ನಾಗರಾಜ್ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ

ಕೆ.ಸಿ.ನಾಗರಾಜ್ ಒಂದನೇ ಪ್ರತಿವಾದಿಗಳಾದ ವಿ.ರಾಜಶೇಖರನ್ ಬಿನ್ ವೇಲುಸ್ವಾಮಿ ವಾಹನದಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ
ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಕಾರ್ಮಿಕ ಇಲಾಖೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–30/2012 ದಿನಾಂಕ:2–5–2012**

**ಅರ್ಜಿದಾರರು**

1. ಮಮ್ತಾಜ್ ಬಿ ಕೋಂ ಲೇಟ್ ಸೈಯದ್ ಬಾಷಾ ಸಾಬ್ 42 ವರ್ಷಗಳು.
2. ಫರೀದಾ ಬಾನು ತಂದೆ ಲೇಟ್ ಸೈಯದ್ ಬಾಷಾ ಸಾಬ್ 22 ವರ್ಷಗಳು.
3. ಮೊಹಮದ್ ಗೌಸ್ ತಂದೆ ಲೇಟ್ ಸೈಯದ್ ಬಾಷಾ ಸಾಬ್ 21 ವರ್ಷಗಳು
4. ರೇಷ್ಮಾ ಬಾನು ತಂದೆ ಲೇಟ್ ಸೈಯದ್ ಬಾಷಾ ಸಾಬ್ 19 ವರ್ಷಗಳು
5. ಅಫ್ರೀನ್ ತಾಜ್ ತಂದೆ ಲೇಟ್ ಸೈಯದ್ ಬಾಷಾ ಸಾಬ್ 18 ವರ್ಷಗಳು
6. ಅಂಬ್ರೀನ್ ತಾಜ್ ತಂದೆ ಲೇಟ್ ಸೈಯದ್ ಬಾಷಾ ಸಾಬ್ 13 ವರ್ಷಗಳು

ವಿಳಾಸ:–1 ನೇ ಮೇನ್, 3ನೇ ಕ್ರಾಸ್, ವಿದ್ಯಾನಗರ,
'ಬಿ' ಬ್ಲಾಕ್, ಹರಿಹರ. ದಾವಣಗೆರೆ.

**ಪ್ರತಿವಾದಿಗಳು**

1. ಶಿವಣ್ಣ ತಂದೆ ಬಸಣ್ಣ,
ಲಾರಿ ಮಾಲೀಕರು,ನಂ.ಕೆಎ–16–ಬಿ–950
ದರ್ಮಾಪುರ ಪೋಸ್ಟ್, ಹಿರಿಯೂರು ತಾ॥
ಚಿತ್ರದುರ್ಗ ಜಿಲ್ಲೆ.

2. ದಿ ಆಫೀಸರ್ ರಿಲೆಯೆನ್ಸ್ ಜನರಲ್ ಇನ್ಸೂರೆನ್ಸ್ ಹುಬ್ಬಳ್ಳಿ.

**:: ಪ್ರಕಟಣೆ ::**

ಶ್ರೀ:ಶ್ರೀಮತಿ ಮಮ್ತಾಜ್ ಬಿ ಕೋಂ ಲೇಟ್ ಸೈಯದ್ ಬಾಷಾ ಸಾಬ್, ಫರೀದಾ ಬಾನು ತಂದೆ ಲೇಟ್ ಸೈಯದ್ ಬಾಷಾ ಸಾಬ್, ಮೊಹಮದ್ ಗೌಸ್ ತಂದೆ ಲೇಟ್ ಸೈಯದ್ ಬಾಷಾ ಸಾಬ್, ರೇಷ್ಮಾ ಬಾನು ತಂದೆ ಲೇಟ್ ಸೈಯದ್ ಬಾಷಾ ಸಾಬ್, ಅಫ್ರೀನ್ ತಾಜ್ ತಂದೆ ಲೇಟ್ ಸೈಯದ್ ಬಾಷಾ ಸಾಬ್, ಅಂಬ್ರೀನ್ ತಾಜ್ ತಂದೆ ಲೇಟ್ ಸೈಯದ್ ಬಾಷಾ ಸಾಬ್ ಇವರುಗಳಾದ ನಾವು ಮೃತ ಮೆಹಬೂಬ್ ಬಾಷ ಇವರ ತಾಯಿ ಮತ್ತು ಸಹೋದರ, ಸಹೋದರಿಯರು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ಮೆಹಬೂಬ್ ಬಾಷ ಪ್ರತಿವಾದಿಗಳಾದ ಶಿವಣ್ಣ ತಂದೆ ಬಸಣ್ಣರವಲ್ಲಿ ಕ್ಲೀನರ್‌ನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ
ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪಿ.ಆರ್. 661**

## ಕಾರ್ಮಿಕ ಇಲಾಖೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–24/2012 ದಿನಾಂಕ:2–5–2012**

**ಅರ್ಜಿದಾರರು**

1. ಲತಾ ಬಾಯಿ ಕೋಂ ಲೇಟ್ ಸುನಿಲ್ ಶಿಂದೆ 30 ವರ್ಷಗಳು.
2. ಸೋನಾಜಿ ತಂದೆ ಲೇಟ್ ಸುನಿಲ್ ಶಿಂದೆ 12 ವರ್ಷಗಳು.
3. ಅತುಲ್ ತಂದೆ ಲೇಟ್ ಸುನಿಲ್ ಶಿಂದೆ 10 ವರ್ಷಗಳು.
4. ರೋಷನ್ ತಂದೆ ಲೇಟ್ ಸುನಿಲ್ ಶಿಂದೆ 12 ವರ್ಷಗಳು.
5. ರುತಾ ಬಾಯಿ @ ದಗಡಿ ಬಾಯಿ ಕೋಂ ಸಂಬಾಜಿ ಶಿಂದೆ 70 ವರ್ಷಗಳು.

ವಿಳಾಸ:– ಹತೋಳ, ಬಿಡ್ ಜಿಲ್ಲೆ, ಮಹಾರಾಷ್ಟ್ರ

**ಪ್ರತಿವಾದಿಗಳು**

1. ಮದನ್ ರಾವ್ ವಸಂತ್ ರಾವ್ ಮೊಹಿತೆ,
ಗೂಡ್ಸ್ ಟ್ಯಾಂಕರ್ ಮಾಲೀಕರು, ನಂ.ಎಂಹೆಚ್–11/ಎಎಲ್–1105 ರೆತಾರಿ ಬಿ ಕೆ, ಕರದ್ ತಾಲ್ಲೂಕ್,
ಸತಾರ ಜಿಲ್ಲೆ.

3. ದಿ ಡಿವಿಜನಲ್ ಮೇನೇಜರ್,
ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ.
ಡಿವಿಜನಲ್ ಆಫೀಸ್, ದಾವಣಗೆರೆ.

**:: ಪ್ರಕಟಣೆ ::**

ಶ್ರೀ:ಶ್ರೀಮತಿ ಲತಾ ಬಾಯಿ ಕೋಂ ಲೇಟ್ ಸುನಿಲ್ ಶಿಂದೆ, ಸೋನಾಜಿ ತಂದೆ ಲೇಟ್ ಸುನಿಲ್ ಶಿಂದೆ, ಅತುಲ್ ತಂದೆ ಲೇಟ್ ಸುನಿಲ್ ಶಿಂದೆ, ರೋಷನ್ ತಂದೆ ಲೇಟ್ ಸುನಿಲ್ ಶಿಂದೆ, ರುತಾ ಬಾಯಿ @ ದಗಡಿ ಬಾಯಿ ಕೋಂ ಸಂಬಾಜಿ ಶಿಂದೆ ಇವರುಗಳಾದ ನಾವು ಮೃತ ಸುನಿಲ್ ಶಿಂದೆ ಇವರ ಹೆಂಡತಿ, ಮಕ್ಕಳು ಮತ್ತು ತಾಯಿ ಎಂದೂ ನಾವು ಮೃತ ಸುನಿಲ್ ಶಿಂದೆ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ಸುನಿಲ್ ಶಿಂದೆ ಒಂದನೇ ಪ್ರತಿವಾದಿಗಳಾದ ಮದನ್ ರಾವ್ ವಸಂತ್ ರಾವ್ ಮೊಹಿತೆ ವಾಹನದಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ
ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಕಾರ್ಮಿಕ ಇಲಾಖೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–25/2012 ದಿನಾಂಕ:2–5–2012**

**ಅರ್ಜಿದಾರರು**

1. ಅನಿತಾ ವಾಟಿ @ ಲಕ್ಷ್ಮಿ ಕೋಂ ಲೇಟ್ ನರೇಶ್ @ ಸುನಿಲ್ ಲರೆ @ ನಾರೇಶ್ ಕುಮಾರ್ ವಾಟಿ. 24 ವರ್ಷಗಳು.
2. ಸುಷೇಶ್‌ಕುಮಾರ್ ತಂದೆ ಲೇಟ್ ನರೇಶ್ @ ಸುನಿಲ್ ಲರೆ @ ನಾರೇಶ್ ಕುಮಾರ್ ವಾಟಿ. 4 ವರ್ಷಗಳು.
3. ಲಾಚ್ನಿ ಕೋಂ ಬುದ್ರಾಂ, 58 ವರ್ಷಗಳು
4. ಬುದ್ರಾಂ ಬಿನ್ ಪಾಗ್ಸು, 65 ವರ್ಷ

ವಿಳಾಸ:– ಮೊಹಪಾಲ್ ಗ್ರಾಮ, ಬಾಸ್ತರ್ (ಛತ್ತಿಸ್‌ಘಡ)
ಕೇರಾಫ್ ರಾಮ್‌ದಾಯಲ್ ಯಾದವ್,
ಶಂಕರ್ ವಿಹಾರ್ ಬಡಾವಣೆ, ಪಿ ಬಿ ರೋಡ್, ದಾವಣಗೆರೆ.

**ಪ್ರತಿವಾದಿಗಳು**

1. ನಟೇಶನ್ ಪಿ ಬಿನ್ ಪಳನಿಮುತ್ತು,
ಹೆವಿ ಗೂಡ್ಸ್ ವೈಕಲ್ ಮಾಲೀಕರು,
ನಂ.ಟಿಎನ್–28/ಸಿ–8169
#3/125, ಸಿಲಿಯಮಪಟ್ಟಿ ಪೋಸ್ಟ್,
ಅತ್ತೂರ್ ತಾಲ್ಲೂಕ್, ಸೇಲಂ ಜಿಲ್ಲೆ.

2. ದಿ ಡಿವಿಜನಲ್ ಮೇನೇಜರ್,
ಡಿವಿಜನಲ್ ಆಫೀಸ್,
ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ. ದಾವಣಗೆರೆ.

:: ಪ್ರಕಟಣೆ ::

ಶ್ರೀ:ಶ್ರೀಮತಿ ಅನಿತಾ ವಾಟಿ @ ಲಕ್ಷ್ಮಿ ಕೋಂ ಲೇಟ್ ನರೇಶ್ @ ಸುನಿಲ್, ಲರೆ @ ನಾರೇಶ್ ಕುಮಾರ್ ವಾಟಿ. ಸುಷೇಶ್‌ಕುಮಾರ್ ತಂದೆ ಲೇಟ್ ನರೇಶ್ @ ಸುನಿಲ್ ಲರೆ @ ನಾರೇಶ್ ಕುಮಾರ್ ವಾಟಿ ಲಾಚ್ನಿ ಕೋಂ ಬುದ್ರಾಂ, ಬುದ್ರಾಂ ಬಿನ್ ಪಾಗ್ನು ಇವರುಗಳಾದ ನಾವು ಮೃತ ನರೇಶ್ @ ಸುನಿಲ್, ಲರೆ @ ನಾರೇಶ್ ಕುಮಾರ್ ವಾಟಿ ಇವರ ಹೆಂಡತಿ, ಮಗ ಮತ್ತು ತಾಯಿ–ತಂದೆ ಎಂದೂ ನಾವು ಮೃತ ನರೇಶ್ @ ಸುನಿಲ್, ಲರೆ @ ನಾರೇಶ್ ಕುಮಾರ್ ವಾಟಿ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ನರೇಶ್ @ ಸುನಿಲ್, ಲರೆ @ ನಾರೇಶ್ ಕುಮಾರ್ ವಾಟಿ ಒಂದನೇ ಪ್ರತಿವಾದಿಗಳಾದ ನಟೇಶನ್ ಪಿ ಬಿನ್ ಪಳನಿಮುತ್ತು ವಾಹನದಲ್ಲಿ ಲೇಬರ್/ಹೆಲ್ಪರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ
ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪಿ.ಆರ್. 660**

## ಒಳಾಡಳಿತ ಸಚಿವಾಲಯ

## ಅಧಿಕೃತ ಜ್ಞಾಪನ

**ಸಂಖ್ಯೆ : ಒಇ 69 ಪೊಸಿಲಿ 2007, ಬೆಂಗಳೂರು, ದಿನಾಂಕ: 16–04–2012**

**ವಿಷಯ:–** ಪೊಲೀಸ್ ಇಲಾಖೆಯಲ್ಲಿನ ಸಹಾಯಕ ಆಡಳಿತಾಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಒಇ 69 ಪೊಸಿಲಿ 2007 ದಿನಾಂಕ 07–02–2008 ರಲ್ಲಿ ದಿನಾಂಕ 01–01–2008 ರಲ್ಲಿದ್ದಂತೆ ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯ ಸಹಾಯಕ ಆಡಳಿತಾಧಿಕಾರಿ, (ಸಮೂಹ–ಬಿ ವೃಂದ), ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಸಂಬಂಧಿಸಿದ ಅಧಿಕಾರಿಗಳಿಂದ ಸಲಹೆ / ಆಕ್ಷೇಪಣೆಗಳಿದ್ದರೆ 30 ದಿನಗಳೊಳಗಾಗಿ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಈ ಕರಡು ಜೇಷ್ಠತಾ ಪಟ್ಟಿಯ ಬಗ್ಗೆ ನಿಗದಿತ ಅವಧಿಯೊಳಗೆ ಸ್ವೀಕೃತವಾದ ಸಲಹೆ / ಆಕ್ಷೇಪಣೆಗಳನ್ನು ಪರಿಗಣಿಸಿ ದಿನಾಂಕ 01–01–2008 ರಲ್ಲಿದ್ದಂತೆ ಸಹಾಯಕ ಆಡಳಿತಾಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿರುವಂತೆ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಕ್ರಮಬದ್ಧ ಮುಂಬಡ್ತಿ ಹೊಂದಿರುವ ಸಹಾಯಕ ಆಡಳಿತಾಧಿಕಾರಿ ಜೇಷ್ಠತಾ ಪಟ್ಟಿ ದಿನಾಂಕ: 01.01.2008**

| ಕ್ರಮ ಸಂಖ್ಯೆ | ಹೆಸರು ಶ್ರೀಯುತರಾದ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಗೆ ಮುಂಬಡ್ತಿ ಹೊಂದಿದ/ ಪರಿಗಣಿತ ದಿನಾಂಕ | ಷರಾ |
|---|---|---|---|---|---|
| 1. | ಎಂ.ಎಸ್.ನಾಗೇಶರಾವ್. | 02.02.32 | 24.11.51 | 20.09.81 | ನಿವೃತ್ತ |
| 2. | ಹರ್ಷಕುಮಾರ್‌ದಾಸ್. | 24.03.32 | 30.10.55 | 11.11.81 | ನಿವೃತ್ತ |
| 3. | ಕೆ.ದುಗ್ಗಪ್ಪ(ಎಸ್.ಸಿ.) | 21.03.37 | 21.06.60 | 24.02.82 | ನಿವೃತ್ತ |
| 4. | ಕೆ.ಎ.ಶೆಕ್ಕಿ. | 27.08.33 | 17.01.59 | 18.02.82 | ನಿವೃತ್ತ |
| 5. | ಭೀಮರಾವ್ ಹಾಲು (ಎಸ್.ಸಿ) | 24.02.40 | 21.07.75 | 15.02.82 | ಬಡ್ತಿ ಹೊಂದಿದ್ದಾರೆ. |
| 6. | ಕೆ.ಉಷಾದೇವಿ. | 20.01.37 | 07.04.61 | 31.03.82 | ಬಡ್ತಿ ಹೊಂದಿದ್ದಾರೆ. |

| ಕ್ರಮ ಸಂಖ್ಯೆ | ಹೆಸರು ಶ್ರೀಯುತರಾದ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಗೆ ಮುಂಬಡ್ತಿ ಹೊಂದಿದ/ ಪರಿಗಣಿತ ದಿನಾಂಕ | ಷರಾ |
|---|---|---|---|---|---|
| 7. | ಸಾವಿತ್ರಿ ಮೋಹನ್ ಕುಮಾರ್. | 05.03.42 | 07.08.62 | 01.04.82 | ಬಡ್ತಿ ಹೊಂದಿದ್ದಾರೆ. |
| 8. | ಎನ್.ವಿ.ಸುಂದರಮ್ಮ. | 11.03.40 | 24.03.65 | 20.12.82 | ಬಡ್ತಿ ಹೊಂದಿದ್ದಾರೆ. |
| 9. | ಎಂ.ವಿರೂಪಾಕ್ಷಯ್ಯ. | 07.11.36 | 18.08.65 | 27.12.82 | ನಿವೃತ್ತ |
| 10. | ಡಿ.ಸಿ.ಕಾಳೇಗೌಡ. | 08.04.37 | 16.08.63 | 10.12.82 | ನಿವೃತ್ತ |
| 11. | ಕೆ.ಎಸ್.ವಸಂತಲಕ್ಷ್ಮಿ. | 06.05.37 | 06.07.62 | 09.12.82 | ನಿವೃತ್ತ |
| 12. | ಇವಲಿನ್ ಲೋಬೋ. | 07.06.34 | 07.03.63 | 04.01.83 | ನಿವೃತ್ತ |
| 13. | ಎನ್.ಕೆಂಚಪ್ಪ (ಎಸ್.ಸಿ) | 03.06.34 | 04.05.56 | 13.05.83 | ನಿವೃತ್ತ |
| 14. | ಸಿ.ಹೆಚ್.ಸಾವಿತ್ರಮ್ಮ. | 17.09.39 | 27.04.66 | 21.02.83 | ನಿವೃತ್ತ |
| 15. | ಹೆಚ್.ಎಸ್.ರತ್ನ. | 04.10.40 | 04.11.63 | 01.06.83 | ನಿವೃತ್ತ |
| 16. | ಕೆ.ಆರ್.ಗೋಪಾಲನ್. | 23.02.39 | 26.03.64 | 11.03.83 | ನಿವೃತ್ತ |
| 17. | ಎಂ.ಎಸ್.ಅಮೃತ. | 27.12.38 | 20.08.64 | 06.06.83 | ನಿವೃತ್ತ |
| 18. | ಮುದ್ದವೀರಯ್ಯ (ಎಸ್.ಸಿ) | 30.05.51 | 17.07.77 | 15.06.83 | ಬಡ್ತಿ ಹೊಂದಿದ್ದಾರೆ. |
| 19. | ಸಿ.ಪಿ.ಗಂಗಾಧರಯ್ಯ. | 06.08.43 | 08.10.64 | 04.07.83 | ನಿವೃತ್ತ |
| 20. | ಬಿ.ಆರ್.ಗಲಗಲಿ (ಎಸ್.ಟಿ) | 12.03.54 | 04.01.77 | 22.12.83 | ಬಡ್ತಿ ಹೊಂದಿದ್ದಾರೆ |
| 21. | ಎಲ್.ಹೆಚ್.ನಾಗನೂರು (ಎಸ್.ಸಿ) | 01.04.48 | 23.07.73 | 09.12.83 | |
| 22. | ಸತ್ಯನಾರಾಯಣ ಗುಪ್ತ. | 08.01.38 | 27.05.66 | 20.08.84 | ನಿವೃತ್ತ |
| 23. | ಎಂ.ಶೇಖರಪ್ಪ. | 01.07.37 | 28.11.61 | 30.10.85 | ನಿವೃತ್ತ |
| 24. | ಗೋಪಾಲಯ್ಯ (ಎಸ್.ಸಿ). | 20.05.34 | 31.07.57 | 12.03.86 | ನಿವೃತ್ತ |
| 25. | ಟಿ.ಎಸ್.ದೊಡ್ಡಮನಿ (ಎಸ್.ಟಿ) | 12.08.51 | 04.04.77 | 22.05.86 | ಬಡ್ತಿ ಹೊಂದಿದ್ದಾರೆ. |
| 26. | ಕೆ.ಎಸ್.ವಿನ್‌ಸೆಂಟ್‌ರಾಜು. | 15.03.46 | 16.01.68 | 17.10.86 | ಬಡ್ತಿ ಹೊಂದಿದ್ದಾರೆ. |
| 27. | ಹರಿಣಿ ಸತ್ಯಪ್ರಕಾಶ್. | 12.02.47 | 15.12.66 | 29.09.86 | ಬಡ್ತಿ ಹೊಂದಿದ್ದಾರೆ. |
| 28. | ಸೈಯದ್ ಅಬ್ದುಲ್ ಲತೀಫ್. | 02.03.43 | 01.07.67 | 01.10.86 | ನಿವೃತ್ತ |
| 29. | ಟಿ.ಸಿ.ಸಾತಮತೆ (ಎಸ್.ಸಿ.) | 01.06.51 | 01.06.77 | 27.10.86 | ಬಡ್ತಿ ಹೊಂದಿದ್ದಾರೆ. |
| 30. | ಬಿ.ಕೆ.ಶಂಕರ್. | 04.07.43 | 30.12.66 | 27.10.86 | ನಿವೃತ್ತ |
| 31. | ಸಿ.ಆರ್.ಅಂತೋಣಿ. | 26.05.46 | 04.02.70 | 12.01.87 | ನಿವೃತ್ತ |
| 32. | ಎಂ.ಶಿವಣ್ಣ. | 08.12.43 | 12.02.70 | 03.12.87 | ನಿವೃತ್ತ |
| 33. | ವೈ.ವಿ.ವೆಂಕಟೇಶ್ ಐಯ್ಯರ್. | 01.08.40 | 25.04.66 | 27.01.88 | ನಿವೃತ್ತ |
| 34. | ಕೆ.ಎಸ್.ಶ್ರೀನಿವಾಸ ರಾಘವನ್. | 25.10.47 | 13.02.70 | 22.02.88 | ನಿವೃತ್ತ |
| 35. | ಎಲ್.ಕೃಷ್ಣಮೂರ್ತಿ. | 04.12.37 | 16.02.66 | 31.08.88 | ನಿವೃತ್ತ |
| 36. | ಲೋಕ ನಾಯಕ್ (ಎಸ್.ಸಿ.) | 06.11.51 | 20.04.77 | 02.09.88 | |
| 37. | ಟಿ.ಎಂ.ಜಯರಾಂ. | 27.01.38 | 02.03.78 | 14.06.98 | ನಿವೃತ್ತ |

| ಕ್ರಮ ಸಂಖ್ಯೆ | ಹೆಸರು ಶ್ರೀಯುತರಾದ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಗೆ ಮುಂಬಡ್ತಿ ಹೊಂದಿದ/ ಪರಿಗಣಿತ ದಿನಾಂಕ | ಷರಾ |
|---|---|---|---|---|---|
| 38. | ಎಸ್.ಮದ್ದಾನಪ್ಪ. | 01.07.40 | 18.05.78 | 21.05.90 | ನಿವೃತ್ತ |
| 39. | ಡಿ.ಮೋಹನ್‌ದಾಸ್ (ಎಸ್.ಸಿ.) | 01.05.52 | 12.02.82 | 08.04.91 | |
| 40. | ಬಿ.ಪಿ.ವಾಸುದೇವ. | 10.01.43 | 13.05.70 | 31.10.91 | ನಿವೃತ್ತ |
| 41. | ಸೈಯದ್ ದಾವೂದ್ | 12.07.43 | 09.03.77 | 24.02.92 | ನಿವೃತ್ತ |
| 42. | ಕೆ.ದೊರೈರಾಜ್ (ಎಸ್.ಸಿ). | 21.12.53 | 19.04.77 | 11.06.92 | |
| 43. | ಆರ್.ಬಿ.ದಾಸರ್. | 08.01.47 | 12.05.77 | 21.09.92 | ನಿವೃತ್ತ |
| 44. | ಎಂ.ಕ್ಯಾತಯ್ಯ. | 30.10.35 | 07.08.79 | 16.10.92 | ನಿವೃತ್ತ |
| 45. | ರಾಮೇಗೌಡ. | 09.06.47 | 27.05.71 | 21.03.94 | ನಿವೃತ್ತ |
| 46. | ಬಿ.ಬಿ.ಗೊಂದಾಲಿ. | 14.01.40 | 23.03.70 | 30.05.93 | ನಿವೃತ್ತ |
| 47. | ಬಿ.ಕೆ.ಪ್ರಮೀಳಾ. | 03.05.44 | 21.09.70 | 07.10.93 | ನಿವೃತ್ತ |
| 48. | ಗೀತಾ ಎಸ್. ಬೇಲಿ. | 24.06.43 | 26.07.69 | 07.10.93 | ನಿವೃತ್ತ |
| 49. | ಎಂ.ಆರ್.ರಾಮರಾವ್. | 14.06.43 | 07.06.71 | 08.10.93 | ನಿವೃತ್ತ |
| 50. | ಅಣ್ಣೆಗೌಡ. | 18.01.43 | 09.06.71 | 18.11.93 | |
| 51. | ಬಿ.ಕೆ.ರಾಮಪ್ರಸಾದ್. | 21.08.47 | 11.06.71 | 18.10.93 | ನಿವೃತ್ತ |
| 52. | ವಿ.ಎಸ್.ಹೊಂಬಾಳ್. | 10.06.49 | 16.07.73 | 27.04.94 | ನಿವೃತ್ತ |
| 53. | ಶ್ರೀಕಾಂತ್ ಹಮೀದ್‌ಖಾನಿ. | 01.06.49 | 16.07.73 | 04.11.93 | ನಿವೃತ್ತ |
| 54. | ಎಂ.ನಾಗೇಶ್ವರಾಚಾರ್ | 05.09.51 | 14.05.73 | 09.10.93 | |
| 55. | ಗುಲಾಬಿ ಸೋಮಯಾಜಿ. | 15.09.51 | 14.05.73 | 20.10.93 | |
| 56. | ಟಿ.ನಾರಾಯಣಸ್ವಾಮಿ. | 24.01.52 | 05.05.73 | 18.11.93 | |
| 57. | ವಿಶ್ವನಾಥ್. | 28.01.46 | 01.06.73 | 15.11.93 | ನಿವೃತ್ತ |
| 58. | ಬಿ.ವಿ.ನಾಗರಾಜ | 05.02.46 | 01.06.76 | 09.12.93 | ನಿವೃತ್ತ |
| 59. | ಶಂಕರ್ ಹೆಬ್ಬಾರ್. | 05.02.47 | 14.06.73 | 19.03.94 | ನಿವೃತ್ತ |
| 60. | ಎ.ಬಿ.ಕಮತೆ | 01.03.47 | 19.06.73 | 15.07.94 | ನಿವೃತ್ತ |
| 61. | ಸಿ.ಆರ್.ಗಂಗರಾಜ್. | 27.04.47 | 07.09.73 | 11.07.94 | ನಿವೃತ್ತ |
| 62. | ಎಸ್.ಕೆ.ರಂಗನಾಥ್. | 10.05.46 | 08.03.74 | 11.07.94 | ನಿವೃತ್ತ |
| 63. | ಕೆ.ಜಯರಾಮ್. | 25.04.45 | 07.04.75 | 06.07.94 | ನಿವೃತ್ತ |
| 64. | ಹನುಮಂತಯ್ಯ. (ಎಸ್.ಸಿ) | 10.03.42 | 01.11.77 | 03.08.94 | ನಿವೃತ್ತ |
| 65. | ಎಂ.ಜಿ.ಅಸೋಡೆ (ಎಸ್.ಸಿ). | 20.06.50 | 11.11.77 | 01.12.95 | |
| 66. | ಐ.ಕೆ.ತಳವಾರ್. | 31.08.51 | 16.06.75 | 11.12.95 | |
| 67. | ಭೀಮಣ್ಣ. | 10.06.40 | 01.07.70 | 22.05.96 | ನಿವೃತ್ತ |

| ಕ್ರಮ ಸಂಖ್ಯೆ | ಹೆಸರು ಶ್ರೀಯುತರಾದ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಗೆ ಮುಂಬಡ್ತಿ ಹೊಂದಿದ/ ಪರಿಗಣಿತ ದಿನಾಂಕ | ಷರಾ |
|---|---|---|---|---|---|
| 68. | ಹೆಚ್.ಬಿ.ಪುಟ್ಟಸ್ವಾಮಿಗೌಡ. | 16.06.45 | 18.04.75 | 27.05.96 | ನಿವೃತ್ತ |
| 69. | ಎಸ್.ಬಿ.ಧೇಯಣ್ಣವರ್. | 01.06.48 | 29.07.75 | 22.05.96 | |
| 70. | ಜೆ.ಬಿ.ಬೆನ್ನಾಡಿ. | 01.12.48 | 31.07.75 | 15.07.96 | |
| 71. | ವಿ.ಕಾಮಾಕ್ಷಿ. | 22.06.47 | 11.08.75 | 19.07.96 | ನಿವೃತ್ತ |
| 72. | ಕೆ.ಅನಂತಪದ್ಮನಾಭ ಉಪಾದ್ಯಾಯ | 19.08.48 | 01.05.75 | 28.11.96 | |
| 73. | ಡಿ.ಎಸ್.ಪಾಟೀಲ್ (ಎಸ್.ಸಿ). | 05.04.47 | 18.08.75 | 03.08.98 | ನಿವೃತ್ತ |
| 74. | ಎನ್.ಎಸ್.ಪಾಟೀಲ್. | 01.06.47 | 25.08.75 | 13.07.98 | ನಿವೃತ್ತ |
| 75. | ಎಫ್.ಬಿ.ಕರಿಕಟ್ಟಿ. | 02.06.50 | 02.09.75 | 09.07.98 | |
| 76. | ವಿ.ಎಸ್.ಭಾಗ್ಯಲಕ್ಷ್ಮಿ. | 22.02.50 | 09.10.75 | 10.07.98 | |
| 77. | ಜಿ.ಬಿ.ಹಡಪದ್. | 01.05.50 | 19.12.75 | 27.07.98 | |
| 78. | ರಮೇಶ್ ಬಾಬು | 06.05.44 | 18.08.75 | 03.08.98 | ನಿವೃತ್ತ |
| 79. | ಪುಟ್ಟವೆಂಕಟರಮಣ. | 26.05.50 | 24.05.75 | 10.07.98 | |
| 80. | ಎಂ.ಎಂ.ನಾಯಕ್. | 16.06.53 | 18.03.76 | 17.07.98 | |
| 81. | ಸಿ.ವನಿತರಾಜ್. (ಎಸ್.ಸಿ) | 30.08.53 | 12.08.77 | 12.08.98 | |
| 82. | ಬಿ.ಎಂ.ನಾರಾಯಣಸ್ವಾಮಿ. (ಎಸ್.ಸಿ) | 03.04.42 | 02.12.78 | 20.07.98 | ನಿವೃತ್ತ |
| 83. | ಸಿ.ಎಸ್.ಮಲ್ಲಿಕಾರ್ಜುನ್. (ಎಸ್.ಸಿ) | 07.01.54 | 23.04.79 | 24.02.99 | |
| 84. | ಮರಿಜೋಸೆಫ್. | 21.10.49 | 25.05.77 | 27.09.99 | |
| 85. | ಎಸ್.ರಾಮಣ್ಣ. | 10.05.52 | 01.07.77 | 09.08.99 | |
| 86. | ಕೆ.ರುದ್ರಪ್ಪ. | 01.06.53 | 04.08.77 | 24.06.99 | |
| 87. | ಮಲ್ಲಪ್ಪ ಪೂಜಾರಿ. | 08.01.52 | 25.05.75 | 24.06.99 | |
| 88. | ಎಂ.ಐ.ಹುಲ್ಯಾಳ್. | 10.04.46 | 24.05.75 | 30.07.2000 | ನಿವೃತ್ತ |
| 89. | ಎಂ.ಆರ್.ಚಂದ್ರಕಾಂತ್. | 21.09.54 | 17.12.76 | 05.07.2000 | |
| 90. | ಎಸ್.ಆರ್.ಜಮಖಂಡಿ. | 13.05.51 | 24.02.77 | 10.07.2000 | |
| 91. | ವಿ.ಮುರುಳಿಧರ್ (ಎಸ್.ಸಿ). | 25.09.44 | 01.11.80 | 05.07.2000 | ನಿವೃತ್ತ |
| 92. | ಎಂ.ಎನ್.ಸುಧೀರ್‌ಕುಮಾರ್. | 11.05.53 | 18.02.77 | 03.07.2000 | |
| 93. | ಎಸ್.ಆರ್.ಶಿವಾನಂದಮೂರ್ತಿ | 08.12.49 | 20.06.77 | 30.07.01 | |
| 94. | ಕೆ.ಜೆ.ರಾಮಚಂದ್ರ | 05.12.53 | 31.03.77 | 04.08.01 | |
| 95. | ಎಸ್.ಎಂ.ಶೇಷಾದ್ರಿ. | 05.05.54 | 23.03.77 | 09.08.01 | |

| ಕ್ರಮ ಸಂಖ್ಯೆ | ಹೆಸರು ಶ್ರೀಯುತರಾದ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಗೆ ಮುಂಬಡ್ತಿ ಹೊಂದಿದ/ ಪರಿಗಣಿತ ದಿನಾಂಕ | ಷರಾ |
|---|---|---|---|---|---|
| 96. | ಮಹಮದ್ ಗೌಸ್‌ಮೊಹಿನುದ್ದೀನ್ | 01.06.54 | 01.05.77 | 25.07.01 | |
| 97. | ಹೆಚ್.ಸಿ.ಶಂಕರಲಿಂಗೇಗೌಡ | 03.04.52 | 23.03.77 | 01.08.01 | |
| 98. | ಎಂ.ಸೈಯದ್ ಖಾಸಿಂ | 20.11.51 | 16.07.77 | 26.03.02 | |
| 99. | ಟಿ.ಆರ್.ಮೊಹಮ್ಮದ್ ನಾಸೀರುದ್ದೀನ್ | 22.01.47 | 13.05.77 | 01.08.02 | ನಿವೃತ್ತ |
| 100. | ಎಸ್.ಎಸ್.ಕಗ್ಗದಾಳ | 01.06.48 | 09.05.77 | 10.10.02 | ನಿವೃತ್ತ |
| 101. | ಗೋವಿಂದರಾಜು | 25.04.46 | 28.05.77 | 08.11.02 | ನಿವೃತ್ತ |
| 102. | ಜಿ.ಎಸ್.ಪಾರ್ವತಿ | 14.04.49 | 21.07.77 | 12.06.03 | |
| 103. | ಹೆಚ್.ಎ.ರಾಮಕೃಷ್ಣಯ್ಯ | 10.11.54 | 15.04.78 | 05.02.04 | |
| 104. | ಕೆ.ಆರ್.ನಾಗರಾಜ್ ರಾವ್ | 27.05.55 | 19.04.78 | 05.03.04 | |
| 105. | ಪಿ.ಡಿ.ಚೌಡೇಗೌಡ | 23.12.49 | 15.04.78 | 02.04.04 | |
| 106. | ಗಂಗತಿಮ್ಮಯ್ಯ (ಎಸ್.ಸಿ) | 18.02.52 | 02.03.82 | 25.10.04 | |
| 107. | ಆರ್.ತಿಮ್ಮಣ್ಣ (ಎಸ್.ಟಿ) | 05.03.52 | 23.02.82 | 05.10.04 | |
| 108. | ಎಸ್.ಕೆ.ಗೌರಮ್ಮ | 23.07.49 | 21.07.77 | 08.10.04 | |
| 109. | ಎ.ಎಸ್.ಸಾಲಿಮಠ್ | 01.01.48 | 19.04.78 | 03.11.04 | ನಿವೃತ್ತ |
| 110. | ರಂಗನಾಥ್ | 18.03.50 | 28.04.78 | 09.12.04 | |
| 111. | ರಾಮಕೃಷ್ಣ ಅಯ್ಯಂಗಾರ್ | 14.02.52 | 13.04.78 | 15.10.04 | |
| 112. | ಎಸ್.ಬಿ ಶಿವಬಸಪ್ಪ | 03.03.52 | 11.04.78 | 19.11.04 | |
| 113. | ಹೆಚ್.ಎಸ್.ಹನುಮಂತಯ್ಯ (ಎಸ್‌ಸಿ) | 27.07.54 | 02.03.82 | 08.10.04 | |
| 114. | ಲಲಿತಾ ಕೆ.ರಾಣಿ | 09.12.48 | 11.08.75 | 12.09.05 | ನಿವೃತ್ತ |
| 115. | ಪಿ.ಎಲ್.ದೊಡ್ಡಮನಿ | 06.07.53 | 01.03.82 | 09.08.05 | |
| 116. | ಹೆಚ್.ರಾಮಚಂದ್ರಪ್ಪ (ಎಸ್.ಸಿ) | 01.06.55 | 05.03.82 | 29.08.05 | |
| 117. | ಎನ್.ಜಯಶ್ರೀ (ಎಸ್.ಸಿ) | 20.03.56 | 01.03.82 | 17.08.05 | |
| 118. | ಹೆಚ್.ಕೆ.ಜಯಪ್ರಕಾಶ್ (ಎಸ್.ಸಿ) | 02.08.54 | 03.03.82 | 08.09.05 | |
| 119. | ಚಂದ್ರಯ್ಯ (ಎಸ್.ಸಿ) | 05.04.52 | 03.12.81 | 26.08.05 | |
| 120. | ಆರ್.ಕೆ.ತುಳಸಿ (ಎಸ್.ಸಿ) | 05.08.53 | 04.05.77 | 12.01.06 | |
| 121. | ಹೆಚ್.ಎಂ.ವೆಂಕಟೇಶಪ್ಪ(ಎಸ್.ಸಿ.) | 08.07.55 | 28.08.82 | 19.09.05 | |
| 122. | ವೈ.ಸಿ.ರಾಮಪ್ಪ (ಎಸ್.ಸಿ) | 02.04.51 | 02.11.83 | 12.12.05 | |
| 123. | ವಿ.ತಿಮ್ಮಯ್ಯ (ಎಸ್.ಸಿ) | 10.06.52 | 27.10.83 | 13.02.06 | |

| ಕ್ರಮ ಸಂಖ್ಯೆ | ಹೆಸರು ಶ್ರೀಯುತರಾದ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಗೆ ಮುಂಬಡ್ತಿ ಹೊಂದಿದ/ ಪರಿಗಣಿತ ದಿನಾಂಕ | ಷರಾ |
|---|---|---|---|---|---|
| 124. | ತಿಪ್ಪೇಸ್ವಾಮಿ. ಹೆಚ್. (ಎಸ್.ಸಿ.) | 06.03.53 | 12.12.83 | 28.07.06 | |
| 125. | ಜಿ.ರಾಜಪ್ಪ | 01.07.55 | 05.02.82 | 10.08.06 | |
| 126. | ಹೆಚ್.ವಿ.ರಾಜಶೇಖರಾಚಾರ್ | 12.07.51 | 08.03.82 | 14.08.06 | |
| 127. | ಪಂಪನಗೌಡ | 17.11.54 | 02.11.81 | 25.08.06 | |
| 128. | ಎಲ್.ರಾಮಗೋಪಾಲ್ | 07.07.54 | 11.09.75 | 02.09.06 | |
| 129. | ಎಸ್.ಕೆ.ಕಾಂಬ್ಳೆ (ಎಸ್.ಸಿ) | 25.05.53 | 01.05.79 | 21.08.06 | |
| 130. | ತಾವರನಾಯ್ಕ (ಎಸ್.ಸಿ) | 01.09.49 | 13.12.85 | 10.08.06 | |

**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್. 531**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ** : ಬಿಬಿಎಂಪಿ ಚುನಾವಣೆ 2010 ಅಭ್ಯರ್ಥಿಗಳು ತಮ್ಮ ವೆಚ್ಚ ವಿವರ ಸಲ್ಲಿಸದಿರುವುದರಿಂದ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣಾ) ತಿದ್ದುಪಡಿ ನಿಯಮಗಳು 2009ರ ನಿಯಮ 22(ಡಿ)(5)ರಡಿ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ** : 1) ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಅಧಿನಿಯಮ, 1976 ಕಲಂ 26(ಬಿ) ಮತ್ತು 26 (ಸಿ) ಹಾಗೂ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ಸ್ (ಎಲೆಕ್ಷನ್) (ಅಮೆಂಡ್‌ಮೆಂಟ್ಸ್) ರೂಲ್ಸ್ 2009, 22(ಡಿ)

2) ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ) ಇವರ ವರದಿ ಸಂಖ್ಯೆ: ಅ.ಜಿ.ಚು.ಅ.ಬೆಂ(ಉ) ಪಿಆರ್./257/2011-12 ದಿನಾಂಕ: 12-09-2011

3) ಆಯೋಗದ ನೋಟಿಸು ಸಂಖ್ಯೆ:ರಾಚುಆ 59 ಇಯುಬಿ 2011, ದಿನಾಂಕ: 07-12-2011

**ಪ್ರಸ್ತಾವನೆ:**

**ಶ್ರೀಮತಿ ಎಂ.ಎಸ್.ಶೀಲಾ** ಎಂಬುವವರು 2010ರಲ್ಲಿ ನಡೆದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆಯಲ್ಲಿ ವಾರ್ಡ್ ನಂ. **64** ರಿಂದ ಸ್ಪರ್ಧಿಸಿದ ಅಭ್ಯರ್ಥಿಯಾಗಿರುತ್ತಾರೆ. ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ ಅಧಿನಿಯಮ 1976ರ ಕಲಂ 26(ಬಿ) ಮತ್ತು 26(ಸಿ)ಯಲ್ಲಿ ಉಪಬಂಧಿಸಿರುವಂತೆ ಇವರು ಮತಗಳ ಎಣಿಕೆ ನಡೆದು ಫಲಿತಾಂಶ ಘೋಷಣೆಯಾದ 30 ದಿನಗಳ ಒಳಗೆ ತಾವು ಚುನಾವಣೆ ಸಂಬಂಧ ಮಾಡಿದ ವೆಚ್ಚದ ವಿವರಗಳನ್ನು ತಾವಾಗಲೀ ಅಥವಾ ಅವರ ಅಧಿಕೃತ ಚುನಾವಣಾ ಏಜೆಂಟರ ಮುಖೇನವಾಗಲೀ ಈ ಬಗ್ಗೆ ನಿಗದಿಪಡಿಸಲಾದ ಪ್ರಪತ್ರಗಳಲ್ಲಿ ಅಂದರೆ ಪ್ರಪತ್ರ (ಫಾರಂ) 11 A ಭಾಗ 1, ಭಾಗ 2, ಭಾಗ 3, ಭಾಗ 4 ಭಾಗ 5 ಮತ್ತು ಭಾಗ 6ರಲ್ಲಿ ನಮೂನೆ 11 ಬಿ ಯಂತೆ ಅಫಿಡವಿಟ್ ಸಹಿತ, ಸ್ಪರ್ಧಿಸಿದ್ದ ವಾರ್ಡಿನ ರಿಟರ್ನಿಂಗ್ ಅಧಿಕಾರಿಗೆ ಸಲ್ಲಿಸಿ ನಮೂನೆ 11 ಸಿ ಯಂತೆ ಸ್ವೀಕೃತಿ ಪಡೆಯಬೇಕಾಗಿತ್ತು.

ಉಲ್ಲೇಖ(2)ರಂತೆ ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ), ಬೆಂಗಳೂರು ರವರು ರಾಜ್ಯ ಚುನಾವಣಾ ಆಯೋಗಕ್ಕೆ ದಿನಾಂಕ: **12-09-2011** ರಂದು ವರದಿಯನ್ನು ಸಲ್ಲಿಸಿದ್ದು ಅದರಂತೆ ಮೇಲಿನ ಪ್ಯಾರಾದಲ್ಲಿ ತಿಳಿಸಲಾದ ಅಭ್ಯರ್ಥಿಯು ಚುನಾವಣಾ ವೆಚ್ಚ ವಿವರ ಸಲ್ಲಿಸಿಲ್ಲವೆಂಬುದಾಗಿ ವರದಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಸಂಬಂಧಿಸಿದ ರಿಟರ್ನಿಂಗ್ ಅಧಿಕಾರಿಯು ಮೇಲೆ ತಿಳಿಸಿದ ಅಭ್ಯರ್ಥಿಗೆ ತಿಳುವಳಿಕೆ ಪತ್ರವನ್ನು ದಿನಾಂಕ: **12-05-2011** ರಲ್ಲಿ ಕಳುಹಿಸಿದ್ದು ಅಭ್ಯರ್ಥಿಗೆ ಜಾರಿಯಾಗಿರುತ್ತದೆ. ಅವರು ಲೆಕ್ಕಪತ್ರ ವಿವರಗಳನ್ನಾಗಲೀ, ಕಾನೂನಿನಲ್ಲಿ ವಿವರಿಸಿದ ರೀತಿಯಲ್ಲಿ ಸಕಾಲದಲ್ಲಿ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಸಾಕಷ್ಟು ಸಮರ್ಪಕ ಅಥವಾ ನ್ಯಾಯಸಮ್ಮತವಾದ ಕಾರಣಗಳನ್ನು ಆಯೋಗಕ್ಕೆ ಮನವರಿಕೆ ಮಾಡಿಕೊಡಲು ವಿಫಲರಾದಲ್ಲಿ ನಿಯಮ 22(ಡಿ) (5)ರ ಪ್ರಕಾರ ಕ್ರಮ ವಹಿಸಲು ಮತ್ತು ಅಧಿನಿಯಮದ ಪ್ರಕರಣ 26(ಸಿ) ಯಂತೆ ಅನರ್ಹಗೊಳಿಸಲು ಅವಕಾಶವಿದೆ.

ಮೇಲೆ ಪ್ಯಾರಾ 2ರಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಚುನಾವಣಾ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಇ) (ಎ) ನಿಯಮಗಳು, 2009ರ ನಿಯಮ 22(ಡಿ) (5)ರಡಿ ಏಕೆ ಅನರ್ಹಗೊಳಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡಲು ನೋಟೀಸನ್ನು ನೀಡಿ, ನೋಟೀಸು ತಲುಪಿದ 20 ದಿನಗಳ ಒಳಗೆ ವಿವರಣೆ ನೀಡಲು ಹಾಗೂ ಒಂದು ವೇಳೆ ವೆಚ್ಚ ವಿವರ ಸಲ್ಲಿಸಿದ್ದಲ್ಲಿ ಆ ಬಗ್ಗೆ ವಿವರಗಳನ್ನು ಹಾಗೂ ಅವರ ಮನವಿ ಏನಾದರೂ ಇದ್ದಲ್ಲಿ ಅದರ ಸಹಿತ ಲೆಕ್ಕಪತ್ರ ವಿವರಗಳನ್ನು ಆಯೋಗಕ್ಕೆ ಸಲ್ಲಿಸಲು ಉಲ್ಲೇಖ(3) ರಂತೆ ನೋಟೀಸಿನಲ್ಲಿ ತಿಳಿಯಪಡಿಸಲಾಗಿತ್ತು ಹಾಗೂ ಸದರಿ ನೋಟಿಸು ಜಾರಿಯಾಗಿದೆ. ಹಾಗೂ ನಿಗದಿತ ಅವಧಿಯೊಳಗೆ ವೆಚ್ಚ ವಿವರಗಳನ್ನು ಸಲ್ಲಿಸಿರುವುದಿಲ್ಲ. ಈ ಹಿನ್ನಲೆಯಲ್ಲಿ **ಶ್ರೀಮತಿ ಎಂ.ಎಸ್.ಶೀಲಾ** ರವರು ಚುನಾವಣಾ ವೆಚ್ಚ ವಿವರಗಳನ್ನು ಸಲ್ಲಿಸುವಲ್ಲಿ ಹಾಗೂ ಆಯೋಗದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಯನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ,

**ಆದೇಶ ಸಂಖ್ಯೆ:ರಾಚುಆ 59(1) ಇಯುಬಿ 2011, ಬೆಂಗಳೂರು, ದಿನಾಂಕ: 02-05-2012**

ಮೇಲೆ ವಿವರಿಸಿರುವಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ನಂ. 64 ರ ಸ್ಥಾನಕ್ಕೆ 2010ರಲ್ಲಿ ನಡೆದ ಚುನಾವಣೆಯಲ್ಲಿ ಸ್ಪರ್ಧಿಸಿದ್ದು ದಿನಾಂಕ: **07-12-2011** ರಂದು ಆಯೋಗದಿಂದ ನೀಡಿದ ನೋಟಿಸಿಗೂ ಸಹಾ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ಹಾಗೂ ಚುನಾವಣೆ ವೆಚ್ಚ ವಿವರಗಳನ್ನು ಸಲ್ಲಿಸಿಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಶ್ರೀಮತಿ ಎಂ.ಎಸ್.ಶೀಲಾ** ರವರನ್ನು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ 1976ರ ಪ್ರಕರಣ 26-ಸಿ ಅನುಸಾರ ಈ ಆದೇಶದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು**
**ರಾಜ್ಯ ಚುನಾವಣಾ ಆಯೋಗ**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ** : ಬಿಬಿಎಂಪಿ ಚುನಾವಣೆ 2010 ಅಭ್ಯರ್ಥಿಗಳು ತಮ್ಮ ವೆಚ್ಚ ವಿವರ ಸಲ್ಲಿಸದಿರುವುದರಿಂದ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣಾ) ತಿದ್ದುಪಡಿ ನಿಯಮಗಳು 2009ರ ನಿಯಮ 22(ಡಿ)(5)ರಡಿ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ** : 1) ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಅಧಿನಿಯಮ, 1976 ಕಲಂ 26(ಬಿ) ಮತ್ತು 26 (ಸಿ) ಹಾಗೂ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ಸ್ (ಎಲೆಕ್ಷನ್) (ಅಮೆಂಡ್‌ಮೆಂಟ್ಸ್) ರೂಲ್ಸ್ 2009, 22(ಡಿ)

2) ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ) ಇವರ ವರದಿ ಸಂಖ್ಯೆ: ಅ.ಜಿ.ಚು.ಅ.ಬೆಂ(ಉ) ಪಿಆರ್./257/2011-12 ದಿನಾಂಕ: 12-09-2011

3) ಆಯೋಗದ ನೋಟಿಸು ಸಂಖ್ಯೆ:ರಾಚುಆ 59 ಇಯುಬಿ 2011, ದಿನಾಂಕ: 07-12-2011

**ಪ್ರಸ್ತಾವನೆ:**

**ಶ್ರೀಮತಿ ಎಸ್.ಅಮೃತ** ಎಂಬುವವರು 2010ರಲ್ಲಿ ನಡೆದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆಯಲ್ಲಿ ವಾರ್ಡ್ ನಂ. **76** ರಿಂದ ಸ್ಪರ್ಧಿಸಿದ ಅಭ್ಯರ್ಥಿಯಾಗಿರುತ್ತಾರೆ. ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ ಅಧಿನಿಯಮ 1976ರ ಕಲಂ 26(ಬಿ) ಮತ್ತು 26(ಸಿ)ಯಲ್ಲಿ ಉಪಬಂಧಿಸಿರುವಂತೆ ಇವರು ಮತಗಳ ಎಣಿಕೆ ನಡೆದು ಫಲಿತಾಂಶ ಘೋಷಣೆಯಾದ 30 ದಿನಗಳ ಒಳಗೆ ತಾವು ಚುನಾವಣೆ ಸಂಬಂಧ ಮಾಡಿದ ವೆಚ್ಚದ ವಿವರಗಳನ್ನು ತಾವಾಗಲೀ ಅಥವಾ ಅವರ ಅಧಿಕೃತ ಚುನಾವಣಾ ಏಜೆಂಟರ ಮುಖೇನವಾಗಲೀ ಈ ಬಗ್ಗೆ ನಿಗದಿಪಡಿಸಲಾದ ಪ್ರಪತ್ರಗಳಲ್ಲಿ ಅಂದರೆ ಪ್ರಪತ್ರ (ಫಾರಂ) 11 A ಭಾಗ 1, ಭಾಗ 2, ಭಾಗ 3, ಭಾಗ 4 ಭಾಗ 5 ಮತ್ತು ಭಾಗ 6ರಲ್ಲಿ ನಮೂನೆ 11 ಬಿ ಯಂತೆ ಅಫಿಡವಿಟ್ ಸಹಿತ, ಸ್ಪರ್ಧಿಸಿದ್ದ ವಾರ್ಡಿನ ರಿಟರ್ನಿಂಗ್ ಅಧಿಕಾರಿಗೆ ಸಲ್ಲಿಸಿ ನಮೂನೆ 11 ಸಿ ಯಂತೆ ಸ್ವೀಕೃತಿ ಪಡೆಯಬೇಕಾಗಿತ್ತು.

ಉಲ್ಲೇಖ(2)ರಂತೆ ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ), ಬೆಂಗಳೂರು ರವರು ರಾಜ್ಯ ಚುನಾವಣಾ ಆಯೋಗಕ್ಕೆ ದಿನಾಂಕ: **12-09-2011** ರಂದು ವರದಿಯನ್ನು ಸಲ್ಲಿಸಿದ್ದು ಅದರಂತೆ ಮೇಲಿನ ಪ್ಯಾರಾದಲ್ಲಿ ತಿಳಿಸಲಾದ ಅಭ್ಯರ್ಥಿಯು ಚುನಾವಣಾ ವೆಚ್ಚ ವಿವರ ಸಲ್ಲಿಸಿಲ್ಲವೆಂಬುದಾಗಿ ವರದಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಸಂಬಂಧಿಸಿದ ರಿಟರ್ನಿಂಗ್ ಅಧಿಕಾರಿಯು ಮೇಲೆ ತಿಳಿಸಿದ ಅಭ್ಯರ್ಥಿಗೆ ತಿಳುವಳಿಕೆ ಪತ್ರವನ್ನು ದಿನಾಂಕ: **12-05-2011** ರಲ್ಲಿ ಕಳುಹಿಸಿದ್ದು ಅಭ್ಯರ್ಥಿಗೆ ಜಾರಿಯಾಗಿರುತ್ತದೆ. ಅವರು ಲೆಕ್ಕಪತ್ರ ವಿವರಗಳನ್ನಾಗಲೀ, ಕಾನೂನಿನಲ್ಲಿ ವಿವರಿಸಿದ ರೀತಿಯಲ್ಲಿ ಸಕಾಲದಲ್ಲಿ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಸಾಕಷ್ಟು ಸಮರ್ಪಕ ಅಥವಾ ನ್ಯಾಯಸಮ್ಮತವಾದ ಕಾರಣಗಳನ್ನು ಆಯೋಗಕ್ಕೆ ಮನವರಿಕೆ ಮಾಡಿಕೊಡಲು ವಿಫಲರಾದಲ್ಲಿ ನಿಯಮ 22(ಡಿ) (5)ರ ಪ್ರಕಾರ ಕ್ರಮ ವಹಿಸಲು ಮತ್ತು ಅಧಿನಿಯಮದ ಪ್ರಕರಣ 26(ಸಿ) ಯಂತೆ ಅನರ್ಹಗೊಳಿಸಲು ಅವಕಾಶವಿದೆ.

ಮೇಲೆ ಪ್ಯಾರಾ 2ರಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಚುನಾವಣಾ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಇ) (ಎ) ನಿಯಮಗಳು, 2009ರ ನಿಯಮ 22(ಡಿ) (5)ರಡಿ ಏಕೆ ಅನರ್ಹಗೊಳಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡಲು ನೋಟೀಸನ್ನು ನೀಡಿ, ನೋಟೀಸು ತಲುಪಿದ 20 ದಿನಗಳ ಒಳಗೆ ವಿವರಣೆ ನೀಡಲು ಹಾಗೂ ಒಂದು ವೇಳೆ ವೆಚ್ಚ ವಿವರ ಸಲ್ಲಿಸಿದ್ದಲ್ಲಿ ಆ ಬಗ್ಗೆ ವಿವರಗಳನ್ನು ಹಾಗೂ ಅವರ ಮನವಿ ಏನಾದರೂ ಇದ್ದಲ್ಲಿ ಅದರ ಸಹಿತ ಲೆಕ್ಕಪತ್ರ ವಿವರಗಳನ್ನು ಆಯೋಗಕ್ಕೆ ಸಲ್ಲಿಸಲು ಉಲ್ಲೇಖ(3) ರಂತೆ ನೋಟೀಸಿನಲ್ಲಿ ತಿಳಿಯಪಡಿಸಲಾಗಿತ್ತು ಹಾಗೂ ಸದರಿ ನೋಟಿಸು ದಿನಾಂಕ: **21-12-2011** ರಲ್ಲಿ ಜಾರಿಯಾಗಿದೆ. ಹಾಗೂ ನಿಗದಿತ ಅವಧಿಯೊಳಗೆ ವೆಚ್ಚ ವಿವರಗಳನ್ನು ಸಲ್ಲಿಸಿರುವುದಿಲ್ಲ. ಈ ಹಿನ್ನಲೆಯಲ್ಲಿ ಶ್ರೀಮತಿ ಎಸ್.ಅಮೃತ ರವರು ಚುನಾವಣಾ ವೆಚ್ಚ ವಿವರಗಳನ್ನು ಸಲ್ಲಿಸುವಲ್ಲಿ ಹಾಗೂ ಆಯೋಗದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಯನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ,

**ಆದೇಶ ಸಂಖ್ಯೆ:ರಾಚುಆ 59(6) ಇಯುಬಿ 2011, ಬೆಂಗಳೂರು, ದಿನಾಂಕ: 02-05-2012**

ಮೇಲೆ ವಿವರಿಸಿರುವಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ನಂ. 76 ರ ಸ್ಥಾನಕ್ಕೆ 2010ರಲ್ಲಿ ನಡೆದ ಚುನಾವಣೆಯಲ್ಲಿ ಸ್ಪರ್ಧಿಸಿದ್ದು ದಿನಾಂಕ: **07-12-2011** ರಂದು ಆಯೋಗದಿಂದ ನೀಡಿದ ನೋಟಿಸಿಗೂ ಸಹಾ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ಹಾಗೂ ಚುನಾವಣೆ ವೆಚ್ಚ ವಿವರಗಳನ್ನು ಸಲ್ಲಿಸಿಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಶ್ರೀಮತಿ ಎಸ್.ಅಮೃತ** ರವರನ್ನು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ 1976ರ ಪ್ರಕರಣ 26-ಸಿ ಅನುಸಾರ ಈ ಆದೇಶದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು**
**ರಾಜ್ಯ ಚುನಾವಣಾ ಆಯೋಗ**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ** : ಬಿಬಿಎಂಪಿ ಚುನಾವಣೆ 2010 ಅಭ್ಯರ್ಥಿಗಳು ತಮ್ಮ ವೆಚ್ಚ ವಿವರ ಸಲ್ಲಿಸದಿರುವುದರಿಂದ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣಾ) ತಿದ್ದುಪಡಿ ನಿಯಮಗಳು 2009ರ ನಿಯಮ 22(ಡಿ)(5)ರಡಿ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ** : 1) ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ, 1976 ಕಲಂ 26(ಬಿ) ಮತ್ತು 26 (ಸಿ) ಹಾಗೂ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ (ಎಲೆಕ್ಷನ್) (ಅಮೆಂಡ್‌ಮೆಂಟ್ಸ್) ರೂಲ್ಸ್ 2009, 22(ಡಿ)

2) ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ) ಇವರ ವರದಿ ಸಂಖ್ಯೆ: ಅ.ಜಿ.ಚು.ಅ.ಬೆಂ(ಉ) ಪಿಆರ್./257/2011-12 ದಿನಾಂಕ: 12-09-2011

3) ಆಯೋಗದ ನೋಟಿಸು ಸಂಖ್ಯೆ:ರಾಚುಆ 59 ಇಯುಬಿ 2011, ದಿನಾಂಕ: 07-12-2011

**ಪ್ರಸ್ತಾವನೆ:**

**ಶ್ರೀಮತಿ ಭಾರತಿ.ಎಸ್**. ಎಂಬುವವರು 2010ರಲ್ಲಿ ನಡೆದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆಯಲ್ಲಿ ವಾರ್ಡ್ ನಂ. **76** ರಿಂದ ಸ್ಪರ್ಧಿಸಿದ ಅಭ್ಯರ್ಥಿಯಾಗಿರುತ್ತಾರೆ. ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ ಅಧಿನಿಯಮ 1976ರ ಕಲಂ 26(ಬಿ) ಮತ್ತು 26(ಸಿ)ಯಲ್ಲಿ ಉಪಬಂಧಿಸಿರುವಂತೆ ಇವರು ಮತಗಳ ಎಣಿಕೆ ನಡೆದು ಫಲಿತಾಂಶ ಘೋಷಣೆಯಾದ 30 ದಿನಗಳ ಒಳಗೆ ತಾವು ಚುನಾವಣೆ ಸಂಬಂಧ ಮಾಡಿದ ವೆಚ್ಚದ ವಿವರಗಳನ್ನು ತಾವಾಗಲೀ ಅಥವಾ ಅವರ ಅಧಿಕೃತ ಚುನಾವಣಾ ಏಜೆಂಟರ ಮುಖೇನವಾಗಲೀ ಈ ಬಗ್ಗೆ ನಿಗದಿಪಡಿಸಲಾದ ಪ್ರಪತ್ರಗಳಲ್ಲಿ ಅಂದರೆ ಪ್ರಪತ್ರ (ಫಾರಂ) 11 A ಭಾಗ 1, ಭಾಗ 2, ಭಾಗ 3, ಭಾಗ 4 ಭಾಗ 5 ಮತ್ತು ಭಾಗ 6ರಲ್ಲಿ ನಮೂನೆ 11 ಬಿ ಯಂತೆ ಅಫಿಡವಿಟ್ ಸಹಿತ, ಸ್ಪರ್ಧಿಸಿದ್ದ ವಾರ್ಡಿನ ರಿಟರ್ನಿಂಗ್ ಅಧಿಕಾರಿಗೆ ಸಲ್ಲಿಸಿ ನಮೂನೆ 11 ಸಿ ಯಂತೆ ಸ್ವೀಕೃತಿ ಪಡೆಯಬೇಕಾಗಿತ್ತು.

ಉಲ್ಲೇಖ(2)ರಂತೆ ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ), ಬೆಂಗಳೂರು ರವರು ರಾಜ್ಯ ಚುನಾವಣಾ ಆಯೋಗಕ್ಕೆ ದಿನಾಂಕ: **12-09-2011** ರಂದು ವರದಿಯನ್ನು ಸಲ್ಲಿಸಿದ್ದು ಅದರಂತೆ ಮೇಲಿನ ಪ್ಯಾರಾದಲ್ಲಿ ತಿಳಿಸಲಾದ ಅಭ್ಯರ್ಥಿಯು ಚುನಾವಣಾ ವೆಚ್ಚ ವಿವರ ಸಲ್ಲಿಸಿಲ್ಲವೆಂಬುದಾಗಿ ವರದಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಸಂಬಂಧಿಸಿದ ರಿಟರ್ನಿಂಗ್ ಅಧಿಕಾರಿಯು ಮೇಲೆ ತಿಳಿಸಿದ ಅಭ್ಯರ್ಥಿಗೆ ತಿಳುವಳಿಕೆ ಪತ್ರವನ್ನು ದಿನಾಂಕ: **12-05-2011** ರಲ್ಲಿ ಕಳುಹಿಸಿದ್ದು ಅಭ್ಯರ್ಥಿಗೆ ಜಾರಿಯಾಗಿರುತ್ತದೆ. ಅವರು ಲೆಕ್ಕಪತ್ರ ವಿವರಗಳನ್ನಾಗಲೀ, ಕಾನೂನಿನಲ್ಲಿ ವಿವರಿಸಿದ ರೀತಿಯಲ್ಲಿ ಸಕಾಲದಲ್ಲಿ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಸಾಕಷ್ಟು ಸಮರ್ಪಕ ಅಥವಾ ನ್ಯಾಯಸಮ್ಮತವಾದ ಕಾರಣಗಳನ್ನು ಆಯೋಗಕ್ಕೆ ಮನವರಿಕೆ ಮಾಡಿಕೊಡಲು ವಿಫಲರಾದಲ್ಲಿ ನಿಯಮ 22(ಡಿ) (5)ರ ಪ್ರಕಾರ ಕ್ರಮ ವಹಿಸಲು ಮತ್ತು ಅಧಿನಿಯಮದ ಪ್ರಕರಣ 26(ಸಿ) ಯಂತೆ ಅನರ್ಹಗೊಳಿಸಲು ಅವಕಾಶವಿದೆ.

ಮೇಲೆ ಪ್ಯಾರಾ 2ರಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಚುನಾವಣಾ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಇ) (ಎ) ನಿಯಮಗಳು, 2009ರ ನಿಯಮ 22(ಡಿ) (5)ರಡಿ ಏಕೆ ಅನರ್ಹಗೊಳಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡಲು ನೋಟೀಸನ್ನು ನೀಡಿ, ನೋಟೀಸು ತಲುಪಿದ 20 ದಿನಗಳ ಒಳಗೆ ವಿವರಣೆ ನೀಡಲು ಹಾಗೂ ಒಂದು ವೇಳೆ ವೆಚ್ಚ ವಿವರ ಸಲ್ಲಿಸಿದ್ದಲ್ಲಿ ಆ ಬಗ್ಗೆ ವಿವರಗಳನ್ನು ಹಾಗೂ ಅವರ ಮನವಿ ಏನಾದರೂ ಇದ್ದಲ್ಲಿ ಅದರ ಸಹಿತ ಲೆಕ್ಕಪತ್ರ ವಿವರಗಳನ್ನು ಆಯೋಗಕ್ಕೆ ಸಲ್ಲಿಸಲು ಉಲ್ಲೇಖ(3) ರಂತೆ ನೋಟೀಸಿನಲ್ಲಿ ತಿಳಿಯಪಡಿಸಲಾಗಿತ್ತು ಹಾಗೂ ಸದರಿ ನೋಟಿಸು ದಿನಾಂಕ: **21-12-2011** ರಲ್ಲಿ ಜಾರಿಯಾಗಿದೆ. ಹಾಗೂ ನಿಗದಿತ ಅವಧಿಯೊಳಗೆ ವೆಚ್ಚ ವಿವರಗಳನ್ನು ಸಲ್ಲಿಸಿರುವುದಿಲ್ಲ. ಈ ಹಿನ್ನಲೆಯಲ್ಲಿ ಶ್ರೀಮತಿ ಭಾರತಿ.ಎಸ್. ರವರು ಚುನಾವಣಾ ವೆಚ್ಚ ವಿವರಗಳನ್ನು ಸಲ್ಲಿಸುವಲ್ಲಿ ಹಾಗೂ ಆಯೋಗದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಯನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ,

**ಆದೇಶ ಸಂಖ್ಯೆ:ರಾಚುಆ 59(7) ಇಯುಬಿ 2011, ಬೆಂಗಳೂರು, ದಿನಾಂಕ: 02-05-2012**

ಮೇಲೆ ವಿವರಿಸಿರುವಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ನಂ. **76** ರ ಸ್ಥಾನಕ್ಕೆ 2010ರಲ್ಲಿ ನಡೆದ ಚುನಾವಣೆಯಲ್ಲಿ ಸ್ಪರ್ಧಿಸಿದ್ದು ದಿನಾಂಕ: **07-12-2011** ರಂದು ಆಯೋಗದಿಂದ ನೀಡಿದ ನೋಟಿಸಿಗೂ ಸಹಾ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ಹಾಗೂ ಚುನಾವಣೆ ವೆಚ್ಚ ವಿವರಗಳನ್ನು ಸಲ್ಲಿಸಿಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಶ್ರೀಮತಿ ಭಾರತಿ.ಎಸ್.** ರವರನ್ನು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ 1976ರ ಪ್ರಕರಣ 26-ಸಿ ಅನುಸಾರ ಈ ಆದೇಶದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

ಆಯುಕ್ತರು
ರಾಜ್ಯ ಚುನಾವಣಾ ಆಯೋಗ

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ** : ಬಿಬಿಎಂಪಿ ಚುನಾವಣೆ 2010 ಅಭ್ಯರ್ಥಿಗಳು ತಮ್ಮ ವೆಚ್ಚ ವಿವರ ಸಲ್ಲಿಸದಿರುವುದರಿಂದ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣಾ) ತಿದ್ದುಪಡಿ ನಿಯಮಗಳು 2009ರ ನಿಯಮ 22(ಡಿ)(5)ರಡಿ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ** : 1) ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ, 1959 ಕಲಂ 26(ಬಿ) ಮತ್ತು 26 (ಸಿ) ಹಾಗೂ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ (ಎಲೆಕ್ಷನ್) (ಅಮೆಂಡ್‌ಮೆಂಟ್ಸ್) ರೂಲ್ಸ್ 2009, 22(ಡಿ)

2) ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ) ಇವರ ವರದಿ ಸಂಖ್ಯೆ: ಅ.ಜಿ.ಚು.ಅ.ಬೆಂ(ಉ) ಪಿಆರ್./257/2011-12 ದಿನಾಂಕ: 12-09-2011

3) ಆಯೋಗದ ನೋಟಿಸು ಸಂಖ್ಯೆ:ರಾಚುಆ 59 ಇಯುಬಿ 2011, ದಿನಾಂಕ: 07-12-2011

**ಪ್ರಸ್ತಾವನೆ:**

**ಶ್ರೀ ಎಂ.ರಾಮಯ್ಯ** ಎಂಬುವವರು 2010ರಲ್ಲಿ ನಡೆದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆಯಲ್ಲಿ ವಾರ್ಡ್ ನಂ. **59** ರಿಂದ ಸ್ಪರ್ಧಿಸಿದ ಅಭ್ಯರ್ಥಿಯಾಗಿರುತ್ತಾರೆ. ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ ಅಧಿನಿಯಮ 1976ರ ಕಲಂ 26(ಬಿ) ಮತ್ತು 26(ಸಿ)ಯಲ್ಲಿ ಉಪಬಂಧಿಸಿರುವಂತೆ ಇವರು ಮತಗಳ ಎಣಿಕೆ ನಡೆದು ಫಲಿತಾಂಶ ಘೋಷಣೆಯಾದ 30 ದಿನಗಳ ಒಳಗೆ ತಾವು ಚುನಾವಣೆ ಸಂಬಂಧ ಮಾಡಿದ ವೆಚ್ಚದ ವಿವರಗಳನ್ನು ತಾವಾಗಲೀ ಅಥವಾ ಅವರ ಅಧಿಕೃತ ಚುನಾವಣಾ ಏಜೆಂಟರ ಮುಖೇನವಾಗಲೀ ಈ ಬಗ್ಗೆ ನಿಗದಿಪಡಿಸಲಾದ ಪ್ರಪತ್ರಗಳಲ್ಲಿ ಅಂದರೆ ಪ್ರಪತ್ರ (ಫಾರಂ) 11 A ಭಾಗ 1, ಭಾಗ 2, ಭಾಗ 3, ಭಾಗ 4 ಭಾಗ 5 ಮತ್ತು ಭಾಗ 6ರಲ್ಲಿ ನಮೂನೆ 11 ಬಿ ಯಂತೆ ಅಫಿಡವಿಟ್ ಸಹಿತ, ಸ್ಪರ್ಧಿಸಿದ್ದ ವಾರ್ಡಿನ ರಿಟರ್ನಿಂಗ್ ಅಧಿಕಾರಿಗೆ ಸಲ್ಲಿಸಿ ನಮೂನೆ 11 ಸಿ ಯಂತೆ ಸ್ವೀಕೃತಿ ಪಡೆಯಬೇಕಾಗಿತ್ತು.

ಉಲ್ಲೇಖ(2)ರಂತೆ ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ), ಬೆಂಗಳೂರು ರವರು ರಾಜ್ಯ ಚುನಾವಣಾ ಆಯೋಗಕ್ಕೆ ದಿನಾಂಕ: **12-09-2011** ರಂದು ವರದಿಯನ್ನು ಸಲ್ಲಿಸಿದ್ದು ಅದರಂತೆ ಮೇಲಿನ ಪ್ಯಾರಾದಲ್ಲಿ ತಿಳಿಸಲಾದ ಅಭ್ಯರ್ಥಿಯು ಚುನಾವಣಾ ವೆಚ್ಚ ವಿವರ ಸಲ್ಲಿಸಿಲ್ಲವೆಂಬುದಾಗಿ ವರದಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಸಂಬಂಧಿಸಿದ ರಿಟರ್ನಿಂಗ್ ಅಧಿಕಾರಿಯು ಮೇಲೆ ತಿಳಿಸಿದ ಅಭ್ಯರ್ಥಿಗೆ ತಿಳುವಳಿಕೆ ಪತ್ರವನ್ನು ದಿನಾಂಕ: **04-03-2011** ರಲ್ಲಿ ಕಳುಹಿಸಿದ್ದು ಅಭ್ಯರ್ಥಿಗೆ ಜಾರಿಯಾಗಿರುತ್ತದೆ. ಅವರು ಲೆಕ್ಕಪತ್ರ ವಿವರಗಳನ್ನಾಗಲೀ, ಕಾನೂನಿನಲ್ಲಿ ವಿವರಿಸಿದ ರೀತಿಯಲ್ಲಿ ಸಕಾಲದಲ್ಲಿ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಸಾಕಷ್ಟು ಸಮರ್ಪಕ ಅಥವಾ ನ್ಯಾಯಸಮ್ಮತವಾದ ಕಾರಣಗಳನ್ನು ಆಯೋಗಕ್ಕೆ ಮನವರಿಕೆ ಮಾಡಿಕೊಡಲು ವಿಫಲರಾದಲ್ಲಿ ನಿಯಮ 22(ಡಿ) (5)ರ ಪ್ರಕಾರ ಕ್ರಮ ವಹಿಸಲು ಮತ್ತು ಅಧಿನಿಯಮದ ಪ್ರಕರಣ 26(ಸಿ) ಯಂತೆ ಅನರ್ಹಗೊಳಿಸಲು ಅವಕಾಶವಿದೆ.

ಮೇಲೆ ಪ್ಯಾರಾ 2ರಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಚುನಾವಣಾ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಇ) (ಎ) ನಿಯಮಗಳು, 2009ರ ನಿಯಮ 22(ಡಿ) (5)ರಡಿ ಏಕೆ ಅನರ್ಹಗೊಳಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡಲು ನೋಟೀಸನ್ನು ನೀಡಿ, ನೋಟೀಸು ತಲುಪಿದ 20 ದಿನಗಳ ಒಳಗೆ ವಿವರಣೆ ನೀಡಲು ಹಾಗೂ ಒಂದು ವೇಳೆ ವೆಚ್ಚ ವಿವರ ಸಲ್ಲಿಸಿದ್ದಲ್ಲಿ ಆ ಬಗ್ಗೆ ವಿವರಗಳನ್ನು ಹಾಗೂ ಅವರ ಮನವಿ ಏನಾದರೂ ಇದ್ದಲ್ಲಿ ಅದರ ಸಹಿತ ಲೆಕ್ಕಪತ್ರ ವಿವರಗಳನ್ನು ಆಯೋಗಕ್ಕೆ ಸಲ್ಲಿಸಲು ಉಲ್ಲೇಖ(3) ರಂತೆ ನೋಟೀಸಿನಲ್ಲಿ ತಿಳಿಯಪಡಿಸಲಾಗಿತ್ತು ಹಾಗೂ ಸದರಿ ನೋಟಿಸು ದಿನಾಂಕ: **17–01–2012** ರಲ್ಲಿ ಜಾರಿಯಾಗಿದೆ. ಹಾಗೂ ನಿಗದಿತ ಅವಧಿಯೊಳಗೆ ವೆಚ್ಚ ವಿವರಗಳನ್ನು ಸಲ್ಲಿಸಿರುವುದಿಲ್ಲ. ಈ ಹಿನ್ನಲೆಯಲ್ಲಿ ಶ್ರೀ ಎಂ.ರಾಮಯ್ಯ ರವರು ಚುನಾವಣಾ ವೆಚ್ಚ ವಿವರಗಳನ್ನು ಸಲ್ಲಿಸುವಲ್ಲಿ ಹಾಗೂ ಆಯೋಗದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಯನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ,

**ಆದೇಶ ಸಂಖ್ಯೆ:ರಾಚುಆ 59(10) ಇಯುಬಿ 2011, ಬೆಂಗಳೂರು, ದಿನಾಂಕ: 02–05–2012**

ಮೇಲೆ ವಿವರಿಸಿರುವಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ನಂ. **59** ರ ಸ್ಥಾನಕ್ಕೆ 2010ರಲ್ಲಿ ನಡೆದ ಚುನಾವಣೆಯಲ್ಲಿ ಸ್ಪರ್ಧಿಸಿದ್ದು ದಿನಾಂಕ: **07–12–2011** ರಂದು ಆಯೋಗದಿಂದ ನೀಡಿದ ನೋಟಿಸಿಗೂ ಸಹಾ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ಹಾಗೂ ಚುನಾವಣೆ ವೆಚ್ಚ ವಿವರಗಳನ್ನು ಸಲ್ಲಿಸಿಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಶ್ರೀ ಎಂ.ರಾಮಯ್ಯ ರವರನ್ನು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ 1959ರ ಪ್ರಕರಣ 26–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು**
**ರಾಜ್ಯ ಚುನಾವಣಾ ಆಯೋಗ**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ** : ಬಿಬಿಎಂಪಿ ಚುನಾವಣೆ 2010 ಅಭ್ಯರ್ಥಿಗಳು ತಮ್ಮ ವೆಚ್ಚ ವಿವರ ಸಲ್ಲಿಸದಿರುವುದರಿಂದ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣಾ) ತಿದ್ದುಪಡಿ ನಿಯಮಗಳು 2009ರ ನಿಯಮ 22(ಡಿ)(5)ರಡಿ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ** : 1) ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ, 1949 ಕಲಂ 26(ಬಿ) ಮತ್ತು 26 (ಸಿ) ಹಾಗೂ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ (ಎಲೆಕ್ಷನ್) (ಅಮೆಂಡ್‌ಮೆಂಟ್ಸ್) ರೂಲ್ಸ್ 2009, 22(ಡಿ)

2) ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ) ಇವರ ವರದಿ ಸಂಖ್ಯೆ: ಅ.ಜಿ.ಚು.ಅ.ಬೆಂ(ಉ) ಪಿಆರ್./257/2011–12 ದಿನಾಂಕ: 12–09–2011

3) ಆಯೋಗದ ನೋಟಿಸು ಸಂಖ್ಯೆ:ರಾಚುಆ 59 ಇಯುಬಿ 2011, ದಿನಾಂಕ: 07–12–2011

**ಪ್ರಸ್ತಾವನೆ:**

**ಶ್ರೀಮತಿ ಎ.ಉಷಾ ಪ್ರೆಸಿಲಾ** ಎಂಬುವವರು 2010ರಲ್ಲಿ ನಡೆದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆಯಲ್ಲಿ ವಾರ್ಡ್ ನಂ. **49** ರಿಂದ ಸ್ಪರ್ಧಿಸಿದ ಅಭ್ಯರ್ಥಿಯಾಗಿರುತ್ತಾರೆ. ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ ಅಧಿನಿಯಮ 1976 ರ ಕಲಂ 26(ಬಿ) ಮತ್ತು 26(ಸಿ)ಯಲ್ಲಿ ಉಪಬಂಧಿಸಿರುವಂತೆ ಇವರು ಮತಗಳ ಎಣಿಕೆ ನಡೆದು ಫಲಿತಾಂಶ ಘೋಷಣೆಯಾದ 30 ದಿನಗಳ ಒಳಗೆ ತಾವು ಚುನಾವಣೆ ಸಂಬಂಧ ಮಾಡಿದ ವೆಚ್ಚದ ವಿವರಗಳನ್ನು ತಾವಾಗಲೀ ಅಥವಾ ಅವರ ಅಧಿಕೃತ ಚುನಾವಣಾ ಏಜೆಂಟರ ಮುಖೇನವಾಗಲೀ ಈ ಬಗ್ಗೆ ನಿಗದಿಪಡಿಸಲಾದ ಪ್ರಪತ್ರಗಳಲ್ಲಿ ಅಂದರೆ ಪ್ರಪತ್ರ (ಫಾರಂ) 11 A ಭಾಗ 1, ಭಾಗ 2, ಭಾಗ 3, ಭಾಗ 4 ಭಾಗ 5 ಮತ್ತು ಭಾಗ 6ರಲ್ಲಿ ನಮೂನೆ 11 ಬಿ ಯಂತೆ ಅಫಿಡವಿಟ್ ಸಹಿತ, ಸ್ಪರ್ಧಿಸಿದ್ದ ವಾರ್ಡಿನ ರಿಟರ್ನಿಂಗ್ ಅಧಿಕಾರಿಗೆ ಸಲ್ಲಿಸಿ ನಮೂನೆ 11 ಸಿ ಯಂತೆ ಸ್ವೀಕೃತಿ ಪಡೆಯಬೇಕಾಗಿತ್ತು.

ಉಲ್ಲೇಖ(2)ರಂತೆ ಜಂಟಿ ಆಯುಕ್ತರು ಹಾಗೂ ಅಪರ ಜಿಲ್ಲಾ ಚುನಾವಣಾಧಿಕಾರಿ, ಬಿ.ಬಿ.ಎಂ.ಪಿ (ಉತ್ತರ), ಬೆಂಗಳೂರು ರವರು ರಾಜ್ಯ ಚುನಾವಣಾ ಆಯೋಗಕ್ಕೆ ದಿನಾಂಕ: **12–09–2011** ರಂದು ವರದಿಯನ್ನು ಸಲ್ಲಿಸಿದ್ದು ಅದರಂತೆ ಮೇಲಿನ ಪ್ಯಾರಾದಲ್ಲಿ ತಿಳಿಸಲಾದ ಅಭ್ಯರ್ಥಿಯು ಚುನಾವಣಾ ವೆಚ್ಚ ವಿವರ ಸಲ್ಲಿಸಿಲ್ಲವೆಂಬುದಾಗಿ ವರದಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಸಂಬಂಧಿಸಿದ ರಿಟರ್ನಿಂಗ್ ಅಧಿಕಾರಿಯು ಮೇಲೆ ತಿಳಿಸಿದ ಅಭ್ಯರ್ಥಿಗೆ ತಿಳುವಳಿಕೆ ಪತ್ರವನ್ನು ದಿನಾಂಕ: **04–03–2011** ರಲ್ಲಿ ಕಳುಹಿಸಿದ್ದು ಅದು ಅಭ್ಯರ್ಥಿಗೆ ಜಾರಿಯಾಗಿರುತ್ತದೆ. ಅವರು ಲೆಕ್ಕಪತ್ರ ವಿವರಗಳನ್ನಾಗಲೀ, ಕಾನೂನಿನಲ್ಲಿ ವಿವರಿಸಿದ ರೀತಿಯಲ್ಲಿ ಸಕಾಲದಲ್ಲಿ ವೆಚ್ಚ ವಿವರ ಸಲ್ಲಿಸಲು ವಿಫಲರಾದ ಬಗ್ಗೆ ಸಾಕಷ್ಟು ಸಮರ್ಪಕ ಅಥವಾ ನ್ಯಾಯಸಮ್ಮತವಾದ ಕಾರಣಗಳನ್ನು ಆಯೋಗಕ್ಕೆ ಮನವರಿಕೆ ಮಾಡಿಕೊಡಲು ವಿಫಲರಾದಲ್ಲಿ ನಿಯಮ 22(ಡಿ) (5)ರ ಪ್ರಕಾರ ಕ್ರಮ ವಹಿಸಲು ಮತ್ತು ಅಧಿನಿಯಮದ ಪ್ರಕರಣ 26(ಸಿ) ಯಂತೆ ಅನರ್ಹಗೊಳಿಸಲು ಅವಕಾಶವಿದೆ.

